# ಅಸಂಘಟಿತ ವಲಯ - ಮಾಲ್ ಗಳಲ್ಲಿ ದುಡಿಯುವ ಮಹಿಳೆಯರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿ - ಮಂಗಳೂರು ತಾಲೂಕಿನ ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾನಿಲಯ ಹಂಪಿಯ ಅಭಿವೃದ್ಧಿ ಅಧ್ಯಯನದ ಎಂ.ಫಿಲ್ ಪದವಿಗಾಗಿ

ಅರ್ಪಿಸಿದ ನಿಬಂಧ

ಸಂಶೋಧಕರು

ದಿವ್ಯಜ್ಯೋತಿ

ನೋಂದಾಣಿ ಸಂಖ್ಯೆ :151111030061

ಮಾರ್ಗದರ್ಶಕರು

ಡಾ. ರೇಣುಕಾ ಕೆ.

೨೦೧೭



ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ ಮಂಗಳೂರು - ೫೭೫೦೦೧

1308

# ಅಸಂಘಟಿತ ವಲಯ - ಮಾಲ್ ಗಳಲ್ಲಿ ದುಡಿಯುವ ಮಹಿಳೆಯರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿ - ಮಂಗಳೂರು ತಾಲೂಕಿನ ಒಂದು ಅಧ್ಯಯನ



ಕನ್ನಡ ವಿಶ್ವವಿದ್ಯಾನಿಲಯ ಹಂಪಿಯ ಅಭಿವೃದ್ಧಿ ಅಧ್ಯಯನದ ಎಂ.ಫಿಲ್ ಪದವಿಗಾಗಿ

ಅರ್ಪಿಸಿದ ನಿಬಂಧ

ಸಂಶೋಧಕರು

ದಿವ್ಯಜ್ಯೋತಿ

ನೋಂದಾಣಿ ಸಂಖ್ಯೆ :151111030061

ಮಾರ್ಗದರ್ಶಕರು

ಡಾ. ರೇಣುಕಾ ಕೆ.

೨೦೧೭

ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ ಮಂಗಳೂರು - ೫೭೫೦೦೧

# ಯೋಗ್ಯತಾ ಪತ್ರ

ದಿವ್ಯಜ್ಯೋತಿ ಅವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ "**ಅಸಂಘಟಿತ ವಲಯ ಮಾಲ್ ಗಳಲ್ಲಿ ದುಡಿಯುವ ಮಹಿಳೆಯರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿ - ಮಂಗಳೂರು ತಾಲೂಕಿನ ಒಂದು ಅಧ್ಯಯನ**" ಎಂಬ ಶೀರ್ಷಿಕೆಯ ಈ ನಿಬಂಧವನ್ನು ಎಂ.ಫಿಲ್ ಪದವಿ ಪ್ರಾಪ್ತಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ನಿಬಂಧವು ಸಂಶೋಧಕರ ಸ್ವಂತ ಪರಿಶ್ರಮ, ವಿಶ್ಲೇಷಣೆ, ಅಭಿಪ್ರಾಯ ಸಂಗ್ರಹ ಮತ್ತು ಸಂಶೋಧನೆಯ ಫಲ- ಸ್ವರೂಪವಾಗಿದೆ. ಇವರು ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇನ್ನಿತರ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲ.

ಡಾ. ರೇಣುಕಾ ಕೆ.

ಸಂಶೋಧನ ಮಾರ್ಗದರ್ಶಕರು

ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ ಮಂಗಳೂರು

# ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್ ಪದವಿಗಾಗಿ ಸಾದರಪಡಿಸುವ ““**ಅಸಂಘಟಿತ ವಲಯ ಮಾಲ್ ಗಳಲ್ಲಿ ದುಡಿಯುವ ಮಹಿಳೆಯರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿ - ಮಂಗಳೂರು ತಾಲೂಕಿನ ಒಂದು ಅಧ್ಯಯನ**”” ಎಂಬ ಶೀರ್ಷಿಕೆಯ ಈ ನಿಬಂಧವು ನನ್ನ ಸ್ವತಂತ್ರ ಕೃತಿಯಾಗಿದ್ದು, ವಿಶ್ಲೇಷಣೆ ಮತ್ತು ಅಧ್ಯಯನದ ಫಲೋದಯವಾಗಿದೆ. ಮಂಗಳೂರಿನ , ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ ಡಾ. ರೇಣುಕಾ ಕೆ. ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ನಿಬಂಧವನ್ನು ಬೇರಾವುದೇ ಪದವಿ, ಡಿಪ್ಲೊಮಾ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡದಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

ದಿವ್ಯಜ್ಯೋತಿ
ಸಂಶೋಧಕರು
ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ ಮಂಗಳೂರು

# ಅಧ್ಯಯನದ ವಿವರಗಳು

# ಕೋಷ್ಟಕಗಳ ಪಟ್ಟಿ

# ಅಧ್ಯಾಯ ೧

## ಅಧ್ಯಯನದ ಸ್ವರೂಪ ಮತ್ತು ಉದ್ದೇಶ

೧.೧. ಪೀಠಿಕೆ

೧.೨. ಸಂಘಟಿತ ಮತ್ತು ಅಸಂಘಟಿತ ವಲಯದ ಪರಿಚಯ

೧.೩. ಅಸಂಘಟಿತ ವಲಯದ ಕಾರ್ಯಕ್ಷೇತ್ರಗಳು

೧.೪.ಅಧ್ಯಯನದ ಸಮಸ್ಯೀಕರಣ

೧.೫.ಅಧ್ಯಯನದ ಉದ್ದೇಶಗಳು

೧.೬.ಅಧ್ಯಯನದ ವಿಧಾನಗಳು

೧.೭. ಅಧ್ಯಯನದ ಇತಿಮಿತಿಗಳು

೧.೮.ಅಧ್ಯಯಗಳು

೧.೯. ಕೊನೆ ಟಿಪ್ಪಣಿ

# ಅಧ್ಯಯನದ ಸ್ವರೂಪ ಮತ್ತು ಉದ್ದೇಶ

೧.೧ ಪೀಠಿಕೆ

ನಮ್ಮ ಸಮಾಜದ ಸಾಂಪ್ರದಾಯಿಕ ಮೌಲ್ಯಗಳು ಸ್ತ್ರೀ, ಪುರುಷರ ದುಡಿಮೆಯ ನಡುವೆ ಭೇದ, ತಾರತಮ್ಯ ಹಾಗೂ ನಿರ್ಬಂಧಗಳನ್ನು ಹೇರುತ್ತದೆ. "ಉದ್ಯೋಗಂ ಪುರುಷ ಲಕ್ಷಣಂ" ಎಂದು ಹೇಳಿ ಪುರುಷರು ಹೊರಗೆ ಹೋಗಿ ದುಡಿದು ಆದಾಯಗಳಿಸಿ ಕುಟುಂಬವನ್ನು ನಿರ್ವಹಿಸಬೇಕು ಎಂದು ಹೇಳಿದರೆ, ಸ್ತ್ರೀಯರು ಮನೆಯೊಳಗೇ ಇದ್ದು ಮನೆಗೆಲಸಗಳನ್ನು, ಮಾಡಬೇಕೆಂದು ಹೇಳುತ್ತದೆ. ಸ್ತ್ರೀಯರು ಹೊರಗೆ ದುಡಿಯುವುದನ್ನು ನಿರ್ಬಂಧಿಸುತ್ತದೆ. ಆದರೆ ಅನಿವಾರ್ಯವಾದಾಗ ಅಂದರೆ ಕುಟುಂಬದಲ್ಲಿ ಪುರುಷನಿಲ್ಲದಿದ್ದರೆ, ಇದ್ದರೂ ಮನೆಯ ನಿರ್ವಹಣೆ ಮಾಡದಿದ್ದರೆ ಸ್ತ್ರೀಯರು ಹೊರಗೂ ದುಡಿದು ಮನೆಯನ್ನು ನೋಡಿಕೊಳ್ಳುತ್ತಿರುತ್ತಾರೆ.

ಸ್ತ್ರೀಯರಿಗೆ ಸಂಬಂಧಿಸಿದ ದುಡಿಮೆ ಜೈವಿಕವಾದುದು, ಖಾಸಗಿಯಾದುದು ಹಾಗು ಮನೆಯ ನಾಲ್ಕು ಗೋಡೆಗಳ ಒಳಗೆ ಸೀಮಿತತೆಯನ್ನು ಪಡೆದುಕೊಂಡಿರುವಂಥದ್ದು. ಆದರೆ ಪುರುಷನ ಸಂದರ್ಭದಲ್ಲಿ ದುಡಿಮೆ ಸಾಮಾಜಿಕ ಹಾಗು ಮನೆಯ ಹೊರಗೆ ನೆಲೆಗೊಂಡಿರುವಂಥದ್ದು. ಇದು ಸಾಂಪ್ರದಾಯಿಕವಾದ ದೃಷ್ಟಿಕೋನ.

ಅನಾದಿ ಕಾಲದಿಂದಲೂ ಮಹಿಳೆ ದುಡಿಯುತ್ತಲೇ ಬಂದಿದ್ದಾಳೆ. ಆದರೆ ಸಾಂಪ್ರದಾಯಿಕ ದುಡಿಮೆಗಿಂತ ಇಂದಿನ ದುಡಿಮೆಯ ವಿಧಾನಗಳು ಭಿನ್ನವಾಗಿವೆ. ಇಂದು ಮಹಿಳೆ ಹಲವಾರು ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾಳೆ. ಈ ದುಡಿಮೆಯನ್ನರಿತು ದಿವಾನ್ ಅವರು "ದುಡಿಮೆ ಎನ್ನುವುದು ಸಂಪಾದನ ಚಟುವಟಿಕೆಗಳನ್ನೊಳಗೊಂಡದ್ದು, ಮನೆಯಿಂದ ಹೊರಗೆ ನೆಲೆಗೊಂಡಿರುವಂಥದ್ದು, ಸಾರ್ವಜನಿಕ ಗುಣದಿಂದ ಕೂಡಿದ್ದು ಗಣನೆಗೆ ಮಾಪನಕ್ಕೆ ನಿಲುಕುವಂಥದ್ದಾಗಿರುವುದು" ಆಗಿದೆ ಎಂದು ಹೇಳಿದ್ದಾರೆ. [1]

ಮಾನವನ ಪ್ರಗತಿ ಮತ್ತು ಸಾಧನೆಗಳ ಹಿಂದೆ ಹಾಗು ಜೀವನದ ಸತ್ಯ ಪರೀಕ್ಷೆಗಳನ್ನು ಎದುರಿಸಿ ಮುಂದೆ ಸಾಗುವುದರಲ್ಲಿ ಮಹಿಳೆಯ ಸುವ್ಯಕ್ತ ಪಾತ್ರವಿತ್ತೆಂಬುದಕ್ಕೆ ಇತಿಹಾಸದಲ್ಲಿ ಸಾಕಷ್ಟು ಸಾಕ್ಷಿಗಳಿವೆ. ಮಹಿಳೆಯರಿಗೆ ಅವರ ಸ್ಥಾನಮಾನ ಹಾಗು ಹಕ್ಕುಗಳು ದೊರೆಯುವಂತಾದರೆ ಮಾನವ ಕುಲದ ಉದ್ಧಾರವಾಗಿ ಉತ್ತಮ ಸಮಾಜ ನಿರ್ಮಾಣ ಸಾಧ್ಯವೆಂದು ಸತ್ಯವನ್ನು ಇದು ಅನಾವರಣಗೊಳಿಸುತ್ತದೆ. ಮಹಿಳೆಯು ದುಡಿಮೆಯ ಕ್ಷೇತ್ರದಲ್ಲಿ ಕಾಣಿಸಿಕೊಳ್ಳುವುದು ಇಪ್ಪತ್ತನೆಯ ಶತಮಾನದ ಅದ್ಭುತವೇನಲ್ಲ

ಚರಿತ್ರೆಯ ಆರಂಭದಿಂದಲೂ ಪುರುಷನೊಂದಿಗೆ ಅವಳು ದುಡಿಯುತ್ತಿದ್ದಾಳೆ. ಆದರೆ ಇಂದು ಅವಳನ್ನು ವಿವಿಧ ವರ್ಗಗಳಲ್ಲಿ ವಿವಿಧ ಸ್ತರಗಳಲ್ಲಿ ಗುರುತಿಸಬಹುದು ಅಷ್ಟೇ. ದುಡಿಯುವ ಮಹಿಳೆ ಎಂದಾಕ್ಷಣ ಆಫೀಸು, ಕಾರ್ಖಾನೆಗಳಿಗೆ ಹೋಗುವ ಮಧ್ಯಮ ವರ್ಗದ ಮಹಿಳೆಯನ್ನು ಅವಳ ಆಶೋತ್ತರಗಳನ್ನು ಕಣ್ಮುಂದೆ ತಂದುಕೊಳ್ಳುವುದು ಅಪೂರ್ಣ ಚಿತ್ರವಷ್ಟೇ.

೧೯ನೇ ಶತಮಾನದ ಮಧ್ಯಭಾಗದಿಂದ ೨೦ನೇಯ ಶತಮಾನದ ಪ್ರಾರಂಭದ ಸಮಯದಲ್ಲಿ ಕೈಗಾರೀಕರಣ ಮತ್ತು ನಗರೀಕರಣದಿಂದ ಗ್ರಾಮಗಳಿಂದ ಕುಟುಂಬ ಸಮೇತ ವಲಸೆ ಬಂದ ಮಹಿಳೆಯರು ಗಣಿ, ಹತ್ತಿ,ಗಿರಣಿ ಮತ್ತು ಇತರ ಕಾರ್ಖಾನೆಗಳಲ್ಲಿ ದುಡಿಯಲು ಪ್ರಾರಂಭಿಸಿದರು.

ದುಡಿಯುವ ರಂಗ ಪ್ರವೇಶಿಸಿದಂದಿನಿಂದ ನಿವೃತ್ತಿಯವರೆಗೆ ಮಹಿಳೆ ಪುರುಷ ಪ್ರಧಾನ ಸಮಾಜದಲ್ಲಿಯೇ ಬದುಕುತ್ತಿದ್ದಾಳೆ. ಆದುದರಿಂದಲೇ ಪ್ರತಿಯೊಂದು ಹಂತದಲ್ಲಿಯೂ ರಾಜಿಮಾರ್ಗಕ್ಕೆ ಹೋಗುತ್ತಾಳೆ. ತಂದೆ ಅಥವಾ ಗಂಡನ ಮನೋಗತಕ್ಕೆ ಅನುಗುಣವಾದ ವೃತ್ತಿ ಆರಿಸಿಕೊಳ್ಳುವುದು, ಮನೆಗೆಲಸ ಮತ್ತು ಕಛೇರಿ ಕೆಲಸದ ಎರಡು ತುದಿ ಹಿಡಿದು ಸಮತೋಲನ ಮಾಡುವುದು, ಇಷ್ಟರಲ್ಲೇ ಅವಳ ಜೀವನ ಮುಗಿಯುತ್ತದೆ.

ಹೆಣ್ಣಿನ ಮನೆಯ ಒಳಗಿನ ದುಡಿಮೆ ಅಥವಾ ಶ್ರಮ ಇಲ್ಲಿ, ಪರಿಗಣಿತವಾಗುವುದಿಲ್ಲ ಮೊದಲಿನಿಂದಲೂ ಈ ದುಡಿಮೆ ಎಂಬುದನ್ನು ಪುರುಷಶಾಹಿ ನೆಲೆಗಟ್ಟಿನಲ್ಲಿಯೇ ಗುರುತಿಸುತ್ತಾ ಬಂದಿರುವುದನ್ನು ನಾವು ಕಾಣುತ್ತೇವೆ. ಆಧುನಿಕ ಯುಗದ ಮಹಿಳೆಯು ದುಡಿಮೆಯಲ್ಲಿ ತೊಡಗಿಕೊಂಡಿದ್ದಾಳೆ ಇಂತಹ ದುಡಿಮೆಯಲ್ಲಿ ತೊಡಗಿಕೊಳ್ಳಲು ಇರುವ ಕಾರಣಗಳೇ, ಒತ್ತಡಗಳು. ಸಾಮಾಜಿಕ, ಸಾರ್ವಜನಿಕ ಹಾಗೂ ಮನೆಯ ಹೊರಗಿನ ದುಡಿತದಲ್ಲಿ ಹೆಣ್ಣು ತೊಡಗಬೇಕಾದ ಅನಿವಾರ್ಯತೆ ಇಂದು ಹೆಚ್ಚಿನ ಪ್ರಮಾಣದಲ್ಲಿದೆ. ಅವರು ಆರ್ಥಿಕತೆಗೆ ನೀಡಿರುವ ಕೊಡುಗೆಯು ಪುರುಷರಿಗಿಂತ ಕಡಿಮೆ ಪ್ರಮಾಣವಾಗಿರುತ್ತದೆ. ಏಕೆಂದರೆ ಬಹುಪ್ರಮಾಣದಲ್ಲಿ ಮಹಿಳೆಯರು ಅಸಂಘಟಿತ ವಲಯದಲ್ಲಿ ದುಡಿಯುವವರಾಗಿದ್ದಾರೆ.

ಸಾಮಾಜಿಕ ಹಾಗು ಸಾರ್ವಜನಿಕವಾದ ಹೊರಗಿನ ದುಡಿಮೆಯಲ್ಲಿ ಪ್ರಮುಖವಾಗಿ ಎರಡು ವಲಯಗಳನ್ನು ಕಾಣುತ್ತೇವೆ. ಸಂಘಟಿತ ವಲಯ ಹಾಗು ಅಸಂಘಟಿತ ವಲಯಗಳನ್ನು ಕಾಣುತ್ತೇವೆ.

## ೧.೨ ಸಂಘಟಿತ ಮತ್ತು ಅಸಂಘಟಿತ ವಲಯದ ಪರಿಚಯ

ಕೆಲಸದ ಭದ್ರತೆ ಇರುವ ಸರಕಾರವು ಕಾರ್ಮಿಕರಿಗಾಗಿ ರೂಪಿಸಿರುವ ಕಾನೂನುಗಳನ್ನು ಪಾಲಿಸುವಂತಹ ಸಂಘ ಸಂಸ್ಥೆಗಳಲ್ಲಿನ ದುಡಿಮೆಯನ್ನು ಸಂಘಟಿತ ವಲಯದ ದುಡಿಮೆ ಎನ್ನುತ್ತಾರೆ. . ಇಲ್ಲಿ ನೌಕರರ ವೇತನ, ಕೆಲಸದ ಅವಧಿ, ಕೆಲಸದ ವಿಧಾನ ಇತ್ಯಾದಿಗಳನ್ನು ಸಂಘಟನಾಕಾರರು ಕಾರ್ಮಿಕ ಸಂಘಟನೆಗಳೊಂದಿಗೆ ಚರ್ಚಿಸಿ ನಿರ್ಣಯಿಸುವರು. ಇಲ್ಲಿ ಕಾರ್ಮಿಕರಿಗೆ ಯಾವುದೇ ರೀತಿಯ ಸಮಸ್ಯೆಗಳು ಉಂಟಾದಾಗ ಬೇಕಾದ ಸೌಲಭ್ಯಗಳನ್ನು ಒದಗಿಸುವಲ್ಲಿ ಕ್ರಮ ಕೈಗೊಳ್ಳುವುದು.

ಉದ್ಯೋಗದ ಭದ್ರತೆಯನ್ನು ಒದಗಿಸುವ ಹಾಗೂ ಸೇವಾ ನಿಯಮಗಳನ್ನು ಪಾಲಿಸುವ ಸಲುವಾಗಿ ಸರಕಾರ ರೂಪಿಸಿರುವ ಶಾಸನಗಳು ಹಾಗು ಕಾನೂನುಗಳ ಚೌಕಟ್ಟಿನಿಂದ ಹೊರಗಿರುವ ಕಾರ್ಮಿಕ ಸಂಘ, ಸಂಘಟನೆಗಳು ಇಲ್ಲದ ಉತ್ಪಾದನಾ ಘಟಕಗಳನ್ನು ಅಸಂಘಟಿತ ಮತ್ತು ಅನೌಪಚಾರಿಕ ಘಟಕಗಳೆಂದೂ ಅಲ್ಲಿ ದುಡಿಯುವ ದುಡಿಮೆಗಾರರನ್ನು ಅಸಂಘಟಿತ ದುಡಿಮೆಗಾರರೆಂದು ಕರೆಯುವರು. "ಯಾವ ದುಡಿಮೆಯಲ್ಲಿ ಒಂದೇ ಉದ್ದೇಶಕ್ಕಾಗಿ ಒಗ್ಗೂಡಿ ತಮ್ಮ ಹಿತಾಸಕ್ತಿಗಳನ್ನು ಪೂರೈಸಿಕೊಳ್ಳಲು ಸದ್ಯಾವಿಲ್ಲವೋ ಅವೆಲ್ಲವೂ ಅಸಂಘಟಿತ ವಲಯಗಳು" ಎಂದು ಕಾರ್ಮಿಕ ಆಯೋಗ ಅಸಂಘಟಿತ ವಲಯವನ್ನು ವ್ಯಾಖ್ಯಾನಿಸಿದೆ.[2]

ಈ ಅಸಂಘಟಿತ ಕ್ಷೇತ್ರದಲ್ಲಿ ದುಡಿಯುವವರಲ್ಲಿ ಮಹಿಳೆಯರ ಪಾಲು ದೊಡ್ಡದು. ಯಾವುದೇ ಸಂಘ ಅಥವಾ ಸಂಘಟನೆಗಳಿಂದ ಹೊರತಾದ ಅಸಂಘಟಿತ ವಲಯದಲ್ಲಿ ದುಡಿಮೆಗಾರರು ಅತಿ ಹೆಚ್ಚು ಶೋಷಣೆಗೆ ಈಡಾಗುತ್ತಾರೆ. ಸಾಮಾನ್ಯವಾಗಿ ಹೆಣ್ಣು ಮಕ್ಕಳನ್ನು ಅವರು ವಾಸಿಸುವ ಸ್ಥಳಗಳಿಂದ ಹೊರತುಪಡಿಸಿ ಬೇರೆ ಸ್ಥಳಗಳಿಗೆ ಕೆಲಸ ಮಾಡಲು ಕಳುಹಿಸದೇ ಇರುವ ಸಂದರ್ಭದಲ್ಲಿ ಅನಕ್ಷರತೆ, ಶಿಕ್ಷಣ, ತರಬೇತಿ ಹಾಗೂ ಕೌಶಲ್ಯದ ಕೊರತೆಯಿರುವ ಸಂದರ್ಭಗಳಲ್ಲಿ ಮಹಿಳೆಯರು ಹೆಚ್ಚಾಗಿ ಅಸಂಘಟಿತ ವಲಯಗಳಲ್ಲಿ ದುಡಿಯುವಂತಾಗುತ್ತದೆ.

ಅಸಂಘಟಿತ ವಲಯದಲ್ಲಿ ದುಡಿಮೆ ಮಾಡುವಂತಹ ಕಾರ್ಮಿಕ ಮಹಿಳೆಯರೆಂದರೆ ಬೀಡಿ ಕಾರ್ಮಿಕರು, ಮನೆ ಕೆಲಸದವರು, ತರಕಾರಿ, ಹೂ, ಹಣ್ಣು, ಕಾಯಿ ಬೆಳೆಸುವವರು ಮತ್ತು ಮಾರುವವರು,ಗಾರೆ ಡಾಂಬರು, ಕಲ್ಲು ಮಣ್ಣಿನ ಕೆಲಸದವರು, ಕೃಷಿ ಕಾರ್ಮಿಕರು, ಜವಳಿ ಕಾರ್ಖಾನೆಗಳಲ್ಲಿ, ಬಟ್ಟೆ ಅಂಗಡಿಗಳಲ್ಲಿ ಕೆಲಸಮಾಡುವವರು ಹಾಗೂ ಮುಖ್ಯವಾಗಿ ಮಾಲ್ ಗಳಲ್ಲಿ ದುಡಿಯುವವರು.

ಮಹಿಳೆಯರು ಅಸಂಘಟಿತ ವಲಯಗಳಿಗೆ ಸಂಬಂಧಿಸಿದ ಹಲವಾರು ಕ್ಷೇತ್ರಗಳಲ್ಲಿ ಪ್ರಧಾನ ಪಾತ್ರವಹಿಸುತ್ತಿದ್ದರು ಅವರ ಕೊಡುಗೆಯನ್ನು ಸಮಾಜ ಗುರುತಿಸಿ ಸಾಮಾಜಿಕ ಮೌಲ್ಯ ನೀಡುದಿಲ್ಲ. ಅಂದರೆ ಭಾರತವು ಈಗ ಅಭಿವೃದ್ಧಿ ಹೊಂದುತ್ತ ಬಂದಿದ್ದರು ಅಸಂಘಟಿತ ವಲಯಗಳಲ್ಲಿ ದುಡಿಯುವಂತಹ ಕೋಟ್ಯಾಂತರ ಮಹಿಳೆಯರ ಸ್ಥಿತಿಗತಿ ಇನ್ನೂ ಶೋಷನೀಯವಾಗಿಯೇ ಉಳಿದಿದೆ.

ಸರ್ಕಾರ ಅಸಂಘಟಿತ ವಲಯಗಳಲ್ಲಿ ತೊಡಗಿರುವಂತಹ ಕೋಟ್ಯಾಂತರ ಕಾರ್ಮಿಕರು ಅದರಲ್ಲೂ ಮಹಿಳಾ ಕಾರ್ಮಿಕರಿಗೆ ಸಂವಿಧಾನಾತ್ಮಕ ರಕ್ಷಣೆ ನೀಡುವಲ್ಲಿ ಸಂಪೂರ್ಣ ಸೋತಿದೆ. ರಾಷ್ಟ್ರೀಯ ಕಾರ್ಮಿಕರ ಆಯೋಗದ ಪ್ರಕಾರ ಅಸಂಘಟಿತ ವಲಯ ಎಂದರೆ ನೇಮಕಗೊಂಡ ವ್ಯಕ್ತಿಯ ತಲಾ ಬಂಡವಾಳ ಹೂಡಿಕೆ ಅತೀ ಕಡಿಮೆಯಲ್ಲಿರುವುದು ಎಂದು ಅರ್ಥ.[3]

ನೂರೆಂಟು ರೀತಿಯ ತೊಡಕುಗಳ ಸಂಕೋಲೆಯಲ್ಲಿ ಸಿಲುಕಿಕೊಂಡ ಮಹಿಳೆಯರು ಅನಕ್ಷರತೆ, ಅಜ್ಞಾನ ಮತ್ತು ಅನುಭವಗಳ ಕೊರತೆಯಿಂದ ಪುರುಷನಂತೆ ತಮ್ಮ ಗ್ರಾಮೀಣ ಬದುಕನ್ನೇ ತ್ಯಜಿಸಿ ವಲಸೆ ಹೋದ ಮಹಿಳೆಯರೆಲ್ಲ ಪಟ್ಟಣಗಳಲ್ಲಿ ಅತೀ ಕಡಿಮೆ ಸಂಭಾವನೆಗೆ ಹೆಚ್ಚು ಸಮಯ ದುಡಿಯುವಂತಹ ಅಸಂಘಟಿತ ವಲಯಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರು ಇಂತಹ ಘಟಕಗಳಲ್ಲಿ ಮಹಿಳೆಯರಿಗೆ ಯಾವುದೇ ರೀತಿಯ ಸೌಲಭ್ಯಗಳನ್ನೂ ಕೊಡದೆ ಕೆಲವೊಂದು ಕಡೆ ಸರಿಯಾದ ಸಮಯಕ್ಕೆ ಸಂಭಾವನೆಕೂಡ ಕೊಡದೇ ಇರುವುದನ್ನು ಕಾಣಬಹುದು .

ಮಹಿಳೆಯರನ್ನು ತೊಡಗಿಸಿಕೊಂಡಿರುವಂತಹ ಯಾವುದೇ ಕ್ಷೇತ್ರದಲ್ಲಿ ಯಾವುದೇ ರೀತಿಯ ದುಡಿಮೆಯಾಗಲಿ ಅದು ಅತೀ ಆಯಾಸದಾಯಕವೂ ಮತ್ತು ಆರೋಗ್ಯಕ್ಕೆ ಹಾನಿಕರಕವೂ ಆದದ್ದು ಆಗಿರುತ್ತದೆ ಉದಾಹರಣೆಗೆ ಹೆಚ್ಚು ಸಮಯ ನಿರಂತರವಾಗಿ ನಿಂತುಕೊಂಡೇ, ಬಗ್ಗಿಕೊಂಡೇ, ಅಥವಾ ನೆಲದ ಮೇಲೆ ಕುಳಿತುಕೊಂಡೇ ಮಾಡುವಂತಹ ಕೆಲಸಗಳಾಗಿರುತ್ತದೆ. ಸಾಮಾನ್ಯವಾಗಿ ಇವುಗಳಿಂದ ಬೆನ್ನು,ಕಾಲು ನೋವು ಮತ್ತು ಮೂಳೆ ಸಂಬಂಧಿತ ರೋಗಕ್ಕೆ ತುತ್ತಾಗುವ ಸಂಭವ ಜಾಸ್ತಿ ಜೊತೆಗೆ ಕಣ್ಣು ಶ್ವಾಸಕೋಶ ಮತ್ತಿತರ ಅಂಗಗಳ ತೊಂದರೆಗೆ ತುತ್ತಾಗುತ್ತಾರೆ ಜೊತೆಗೆ ಈ ಉತ್ಪಾದನ ಕೇಂದ್ರಗಳಲ್ಲಿ ಸರಿಯಾದ ರೀತಿಯ ಗಾಳಿ ಬೆಳಕು ದೊರೆಯದಿದ್ದರೆ ಅಶುದ್ಧ ಮತ್ತು ಕಶ್ಮಲ ಗಾಳಿಯನ್ನು ಸೇವಿಸಿ ಕೆಲವೊಂದು ಭಯಾನಕ ರೋಗಗಳಾದಂತಹ ಶ್ವಾಸಕೋಶದ ಕ್ಯಾನ್ಸರ್ ಮೆದುಳಿಗೆ ಸಂಬಂಧ ಪಟ್ಟ ಕಾಯಿಲೆಗಳಿಗೆ ತುತ್ತಾಗುತ್ತಾರೆ. ಇನ್ನೊಂದು ಕಡೆ ಮಹಿಳೆಯಾರು ಕೃಷಿ ಪ್ರಧಾನ ಚಟುವಟಿಕೆಗಳಲ್ಲಿ ತರಕಾರಿ ಹಣ್ಣು ಹಂಪಲುಗಳನ್ನು ಬೆಳೆಸುವ

ಮತ್ತು ಮಾರಾಟ ಮಾಡುವ ಅಥವಾ ಕಸದ ತೊಟ್ಟಿ ಚರಂಡಿಗಳಲ್ಲಿ ತ್ಯಾಜ್ಯ ಅಪಾಯಕಾರಿ ಕಸ ಕಡ್ಡಿಗಳನ್ನು ಹೆಕ್ಕುವ ಮತ್ತು ಸ್ವಚ್ಛಗೊಳಿಸುವ ಸುಡುವ ಬಿಸಿಲಿನಲ್ಲಿ ಸುರಿಯುವ ಮಳೆಯಲ್ಲಿ ನಡುಗಿಸುವ ಚಳಿಯಲ್ಲಿ ನೊಂದುಬೆಂದು ಜೊತೆಗೆ ಅಪಾಯಕಾರಿ ವಸ್ತುಗಳಿಂದ ರಕ್ಷಣೆ ಇಲ್ಲದೆ ತಮ್ಮ ಜೀವನವನ್ನೇ ಮುಡಿಪಾಗಿಟ್ಟುಕೊಂಡು ಕುಟುಂಬಕ್ಕೋಸ್ಕರ ತ್ಯಾಗ ಮಾಡುವುದನ್ನು ಕಾಣಬಹುದು.

ಅಸಂಘಟಿತ ವಲಯವೆಂದು ಗುರುತಿಸುವ ಅನೇಕ ಕ್ಷೇತ್ರಗಳಲ್ಲಿ ದುಡಿಯುವ ಮಹಿಳೆಯರ ಸಂಖ್ಯೆ ಅಧಿಕವಾಗಿದೆ.. "ಕುಟುಂಬ ಆಧಾರಿತ ದುಡಿಮೆಗಾರರು, ಬೀಡಿ ಕಟ್ಟುವವರು, ಗಂಧದ ಕಡ್ಡಿ ತಯಾರಕರು, ಮೇಣದ ಬತ್ತಿ ಹೊಸೆಯುವವರು, ವ್ಯಾಪಾರಿಗಳು ಹಾಗು ಸ್ವಯಂ ಉದ್ಯೋಗಸ್ಥರು" ಇವರನ್ನು ಅಸಂಘಟಿತ ವಲಯದ ಕಾರ್ಮಿಕರು ಎಂದು ಗುರುತಿಸುತ್ತದೆ.[4]

ಇವರಲ್ಲದೆ ಇತರರು, ಎಂದರೆ ಮನೆಕೆಲಸದವರು, ತರಕಾರಿ, ಹೂವು ಹಣ್ಣು ಮಾರುವವರು, ಗಾರ್ಮೆಂಟ್ ಕೆಲಸಗಾರರು, ಆಹಾರ ವಸ್ತುಗಳ ತಯಾರಕರು, ಕಮ್ಮಾರರು ಇನ್ನೂ ಅನೇಕ ವಲಯಗಳಲ್ಲಿ ಕೆಲಸ ಮಾಡುವ ಮಹಿಳೆಯರು. ಅಸಂಘಟಿತ ವಲಯವು ತುಂಬಾ ವ್ಯಾಪಕವಾದುದು. ಆಯಾ ಪ್ರದೇಶಗಳಲ್ಲಿ ದೊರೆಯುವ ಕಚ್ಚಾ ವಸ್ತುಗಳನ್ನಾಧರಿಸಿಯೂ ಅಸಂಘಟಿತ ವಲಯ ವಿಸ್ತೃತವಾಗುತ್ತಾ ಹೋಗುತ್ತದೆ. ಗೇರು ಹೆಚ್ಚಾಗಿ ಬೆಳೆಯುವ ಪ್ರದೇಶದಲ್ಲಿ ಗೇರು ಆಧರಿತ ಉದ್ಯೋಗವಾಗಿರಬಹುದು. ರಬ್ಬರ್ ಹೆಚ್ಚಾಗಿ ಬೆಳೆಯುವ ಪ್ರದೇಶದಲ್ಲಿ ರಬ್ಬರ್ ತಯಾರಿಸುವ ಉದ್ಯೋಗವನ್ನು ಅದು ಕಲ್ಪಸಿಕೊಡುತ್ತದೆ.

ಅಸಂಘಟಿತ ವಲಯದಲ್ಲಿ ಕಾರ್ಮಿಕರು ಹೆಚ್ಚಿನ ಶೋಷಣೆಗೆ ಒಳಗಾಗುವುದರೊಂದಿಗೆ ಇವರಿಗೆ ಯಾವುದೇ ರೀತಿಯ ಹೆಚ್ಚಿನ ಸೌಲಭ್ಯಗಳು ದೊರಕುವುದಿಲ್ಲ. ಇಲ್ಲಿ ಕಾರ್ಮಿಕರು ಮತ್ತು ಮಾಲಿಕರ ನಡುವೆ ಯಾವುದೇ ರೀತಿಯ ಶಾಸನಬದ್ಧ ಒಪ್ಪಂದವಿರುವುದಿಲ್ಲ ಹಾಗು ಸರಕಾರದ ಹಸ್ತಕ್ಷೇಪವಿರುವುದಿಲ್ಲ. ಇಲ್ಲಿ ಕೆಲಸದ ಅವಧಿ, ವೇತನ ಇತ್ಯಾದಿಗಳು ಯಾವುದೇ ರೀತಿಯ ಕಾರ್ಮಿಕ ಸಂಘಗಳ ನಿಯಂತ್ರಣದಲ್ಲಿರುವುದಿಲ್ಲ. ಈ ವಲಯದ ಜನರಿಗೆ ಯಾವುದೇ ರೀತಿಯ ಸಾಮಾಜಿಕ ಭದ್ರತೆ, ವಿಮಾ ಸೌಲಭ್ಯ ಇತ್ಯಾದಿಗಳು ಇರುವುದಿಲ್ಲ. ಇಲ್ಲಿ ದುಡಿಯುವವರು ಸಂಖ್ಯೆಯನ್ನು ಸರಿಯಾಗಿ ಲೆಕ್ಕ ಹಾಕಲು ಸಾಧ್ಯವಿಲ್ಲ. ಏಕೆಂದರೆ ಇವರು ಯಾವುದೇ ಓರ್ವ ಮಾಲಿಕನ ಕೈಕೆಳಗೆ ಅಥವಾ ಒಂದು ಉದ್ಯೋಗದಲ್ಲಿ ಶಾಶ್ವತವಾಗಿ ನೆಲೆ ನಿಲ್ಲುವುದಿಲ್ಲ. ಅಲ್ಲದೆ ವರ್ಷಪೂರ್ತಿ ಉದ್ಯೋಗದಲ್ಲಿ ತೊಡಗಿರುವುದಿಲ್ಲ. ಅಸಂಘಟಿತ ವಲಯದಲ್ಲಿ ದುಡಿಯುವವರ ಸ್ಥಾನಮಾನ ಮತ್ತು ಜೀವನ ಮಟ್ಟವು ಕಡಿಮೆಯಾಗಿರುತ್ತದೆ. ಅಲ್ಲದೆ ಇವರು

ಕಡಿಮೆ ಕೂಲಿ ಹೆಚ್ಚು ಅವಧಿಯ ಕೆಲಸ, ಉದ್ಯೋಗ ಖಾತರಿಯಿಲ್ಲದಿರುವಿಕೆ ಮುಂತಾದ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇಲ್ಲಿ ಮಾಲಿಕರು ಪಡೆಯುವ ಲಾಭ ಅಧಿಕವಾಗಿದ್ದು ಕಾರ್ಮಿಕರಿಗೆ ದೊರಕುವ ಪ್ರತಿಫಲವು ಕಡಿಮೆಯಾಗಿರುತ್ತದೆ. ನಮ್ಮ ದೇಶದಲ್ಲಿರುವ ಆದಾಯ ಮತ್ತು ಸಂಪತ್ತಿನ ಹಂಚುವಿಕೆಯಲ್ಲಿರುವ ಅಸಮಾನತೆಯನ್ನು ಹೋಗಲಾಡಿಸುವುದಕ್ಕೆ ಅಸಂಘಟಿತ ಕಾರ್ಮಿಕರಿಗೂಸೂಕ್ತ ಉದ್ಯೋಗ ರಕ್ಷಣೆ ಮತ್ತು ಸಾಮಾಜಿಕ ಭದ್ರತೆಯನ್ನು ಕೊಡುವುದು ಅಗತ್ಯವಾಗಿದೆ. ಆಗ ಮಾತ್ರ ಭಾರತದಂಥ ರಾಷ್ಟ್ರವು ಮುಂದುವರಿಯಲು ಸಾಧ್ಯ.

### ೧.೩ ಅಸಂಘಟಿತ ವಲಯದ ಕಾರ್ಯಕ್ಷೇತ್ರಗಳು

ಭಾರತದಲ್ಲಿ ದುಡಿಯುವ ರಂಗವನ್ನು ಮಹಿಳೆ ಯಾವಾಗ ಹೇಗೆ ಪ್ರವೇಶಿಸಿದಳೆಂಬ ಪ್ರಶ್ನೆಗೆ ಸರಿಯಾದ ಉತ್ತರವಿಲ್ಲ. ಬೀಜ ಬಿತ್ತುವುದು, ಕಳೆ ಕೀಳುವುದು, ನೀರು ಹಾಕುವುದು, ಕೊಯ್ಲು, ಪಶು ಸಂಗೋಪನೆ, ಕೋಳಿ ಸಾಕಾಣಿಕೆಗಳಲ್ಲಿ ತನ್ನ ಮನೆಯ ಗಂಡಸರ ಜೊತೆ ದುಡಿಯಲಾರಂಭಿಸಿದ್ದೇ ಅಲ್ಲದೆ ಗುಡಿ ಕೈಗಾರಿಕೆಗಳಾದ ಬೀಡಿ ಕಟ್ಟುವುದು, ಹಗ್ಗ ಹೊಸೆಯುವುದು, ಮಡಕೆ ಮಾಡುವುದು ಮುಂತಾದವುಗಳಿಗೆ ಕೈ ಹಚ್ಚಿದಳು. ಆ ನಂತರದ ದಿನಗಳಲ್ಲಿ ಕೈಗಾರಿಕೆ ಮತ್ತು ಗಣಿಗಳಲ್ಲಿ ದುಡಿಯಲು ಆರಂಭಿಸಿದಳು. ಹಾಗೆಯೇ ನರ್ಸಿಂಗ್, ಶಿಕ್ಷಣದಂಥ ಉದ್ಯೋಗದಿಂದ ಇಂದು ಇಂಜಿನಿಯರಿಂಗ್, ಕೈಗಾರಿಕಾ ವಿನ್ಯಾಸ, ಕಂಪ್ಯೂಟರ್ ವಾಸ್ತುಶಿಲ್ಪದಂಥ ರಂಗದಲ್ಲಿಯೂ ಅವಳು ಕಾಲೂರಿದ್ದಾಳೆ.

ಪಿತೃಪ್ರಧಾನ ವ್ಯವಸ್ಥೆಯು ಮಹಿಳೆಯರನ್ನು ನಿರಂತರವಾಗಿ ಪುರುಷರ ಅವಲಂಬಿಯಾಗಿಯೇ ಇರಿಸುವ ಕಾರಣದಿಂದಾಗಿ ಹೆಣ್ಣು ಮತ್ತು ಗಂಡು ಮಕ್ಕಳಿಗೆ ನೀಡುವ ಶಿಕ್ಷಣದಲ್ಲಿಯೇ ಮೂಲಭೂತ ವ್ಯತ್ಯಾಸವನ್ನು ಕುಟುಂಬ ಮಾಡುತ್ತದೆ. ಹೆಚ್ಚಿನ ಕುಟುಂಬಗಳಲ್ಲಿ ಹೆಣ್ಣು ಮಕ್ಕಳಿಗೆ ವೃತ್ತಿಪರ ಶಿಕ್ಷಣ, ವೃತ್ತಿ ಕೌಶಲ ಶಿಕ್ಷಣವನ್ನು ನೀಡುವುದರ ಬಗ್ಗೆ ಸಹಮತವಿರುವುದಿಲ್ಲ. ಮಹಿಳೆಯರ ಶಿಕ್ಷಣ ಮತ್ತು ತರಬೇತಿಗೆ ಬಂಡವಾಳ ಹೂಡಲು ಯಾವುದೇ ಪ್ರೇರಣೆಗಳಿಲ್ಲ. ಇದರಿಂದಾಗಿ ಹೆಚ್ಚಿನ ಸಂಖ್ಯೆಯ ಮಹಿಳಾ ಕಾರ್ಮಿಕರು ಅಸಂಘಟಿತ ವಲಯದಲ್ಲಿಯೇ ದುಡಿಯಲು ಕಾರಣವಾಗಿದೆ. ಅಸಂಘಟಿತ ವಲಯವನ್ನು ೯ ಪ್ರಕಾರದ ಉದ್ಯೋಗಗಳಾಗಿ ವಿಂಗಡಿಸಿದ್ದು ಅವುಗಳ ವಿವರ ಈ ಕೆಳಗಿನಂತಿದೆ.[5]

೧. ಸಾಗುವಳಿದಾರರು: ಗದ್ದೆಯನ್ನು ಉಳುವವರು.

೨. ಕೃಷಿ ಕಾರ್ಮಿಕರು : ಅಕ್ಕಿ, ಗೋಧಿ ಇತ್ಯಾದಿಗಳನ್ನು ಬೆಳೆಸುವವರು.

೩. ಗುಡಿ ಕೈಗಾರಿಕೆ, ಹೈನುಗಾರಿಕೆ, ಅರಣ್ಯಗಾರಿಕೆ, ತೋಟಗಾರಿಕೆ : ಮಡಿಕೆ ತಯಾರಿಕೆ, ಬುಟ್ಟಿ ತಯಾರಿಕೆ, ಹಾಲು ಉತ್ಪಾದನೆ ಜೇನು ಮುಂತಾದ ಅರಣ್ಯದಲ್ಲಿ ದೊರೆಯುವ ವಸ್ತುಗಳು, ಸೇಬು, ಚಹಾ, ಕಾಫಿ ಇತ್ಯಾದಿ.

೪. ಕುಟುಂಬ ಸಂಬಂಧಿ ಕೈಗಾರಿಕೆ : ತಿಂಡಿ ತಯಾರಿಸುವಿಕೆ

೫. ಕುಟುಂಬೇತರ ಕೈಗಾರಿಕೆ

೬. ಕಟ್ಟಡ ನಿರ್ಮಾಣ

೭. ವ್ಯಾಪಾರ ವಾಣಿಜ್ಯ: ಬಟ್ಟೆ ಅಂಗಡಿಗಳು, ದಿನಸಿ ಅಂಗಡಿಗಳು ಇತ್ಯಾದಿ.

೮. ಸಾರಿಗೆ ಸಂಪರ್ಕ

೯. ಇತರೆ

ಈ ಪಟ್ಟಿಯಲ್ಲಿ ಮೊದಲಿನೆರಡು ಕೃಷಿ ಸಂಬಂಧಿ ಚಟುವಟಿಕೆಗಳು ಉಳಿದವು ಕೃಷಿಯೇತರವಾದವುಗಳು ಇನ್ನೂ ಅನೇಕ ಉದ್ಯೋಗಗಳು ಈ ವಲಯಕ್ಕೆ ಸೇರುತ್ತವೆ. ಸಾಂಪ್ರದಾಯಿಕ ಹಾಗು ಆಧುನಿಕ ಎರಡು ರೀತಿಯ ದುಡಿಮೆಗಳನ್ನು ಹೀಗೆ ಗುರುತಿಸಲಾಗಿದೆ.

ಕೃಷಿ, ಹೈನುಗಾರಿಕೆ, ಪಶುಪಾಲನೆ, ಮೀನುಗಾರಿಕೆ, ಕರಕುಶಲ ವಸ್ತುಗಳ ತಯಾರಿಕೆ, ಕೈಮಗ್ಗದ ಕೆಲಸ, ಕಟ್ಟಡ ನಿರ್ಮಾಣ, ಬೆಂಕಿ ಪೊಟ್ಟಣ ತಯಾರಿಕೆ, ಬಿದಿರು ಬುಟ್ಟಿ, ಬಟ್ಟೆ ಹೊಲಿಯುವುದು, ಸಿದ್ಧ ಉಡುಪು ತಯಾರಿಕೆ, ಮನೆಗಳಲ್ಲಿ ಕಸಮುಸುರೆ ಹಾಗು ಬಟ್ಟೆ ತೊಳೆಯುವ ಆಳುಗಳಾಗಿ, ಹಂಗಾಮಿ ಅಥವಾ ದಿನಗೂಲಿ ನೌಕರಿ, ಚಿಲ್ಲರೆ ವ್ಯಾಪಾರ, ತಲೆ ಮೇಲೆ ಹೊತ್ತು ಮಾರುವುದು ಮತ್ತು ಆಹಾರ ಸಂಸ್ಕರಣೆ ಇತ್ಯಾದಿಗಳು ಇದಲ್ಲದೆಯೂ ಮಾಲ್ ನಲ್ಲಿ ಕೆಲಸ, ಕೆಲವು ಖಾಸಗಿ ಕಛೇರಿಗಳಲ್ಲಿ ರಿಸೆಪ್ಷನಿಸ್ಟ್ ಆಗಿಯೂ ದುಡಿಯುವ ಸುಶಿಕ್ಷಿತ ಮಹಿಳೆ, ಅರೆಕಾಲಿಕ ಉಪನ್ಯಾಸಕರು, ಶಿಕ್ಷಕರು ಇವರನ್ನು ಅಸಂಘಟಿತ ವಲಯಕ್ಕೆ ಸೇರಿಸಬಹುದಾಗಿದೆ.

೧.೪ ಸಮಸ್ಯೀಕರಣ

ಮಹಿಳಾ ಉದ್ಯೋಗಿಗಳ ಸಾಮಾಜಿಕ, ಆರ್ಥಿಕ ಸಮಸ್ಯೆಗಳ ಕುರಿತ ವಿಷಯಗಳ ಬಗ್ಗೆ ಈಗಾಗಲೇ ಅನೇಕ ಅಧ್ಯಯನಗಳು ನಡೆದಿರುತ್ತದೆ. ಅವುಗಳ ವಿವರಗಳು ಈ ಕೆಳಕಂಡಂತಿವೆ

ರಾಮೇಗೌಡ ರವರು ಬರೆದ ಜಂಡರ್ ಇನ್ ಇಕ್ವಲಿತಿ, ಪವರ್, ಪ್ರಿವಿಲೇಜ್ ಅಂಡ್ ಪವರ್ಟಿ ಇನ್ ಪ್ಲನ್ ಟೆಶನ್ ನಲ್ಲಿ ಕಾಫಿ ತೋಟಗಳಲ್ಲಿ ಮಹಿಳಾ ಕಾರ್ಮಿಕರ ಸಾಮಾಜಿಕ - ಆರ್ಥಿಕ ಸ್ಥಿತಿಗತಿಗಳನ್ನು ಕುರಿತ ಮಾಹಿತಿಯನ್ನು ಚರ್ಚಿಸಲಾಗಿದೆ. ಭಾರತದ ಆರ್ಥಿಕ ವಲಯದಲ್ಲಿ ಸಂಘತಟಿತ ವಲಯ ಬಹಳ ಮುಖ್ಯ. ಆದರೆ ಸಂಘಟಿತ ವಲಯದ ಚಟುವಟಿಕೆಗಳನ್ನು ಗಾಳಿಗೆ ತೂರಿ ಅಸಂಘಟಿತ ವಲಯದ ಚಟುವಟಿಕೆಗಳನ್ನು ಕಾಫಿ ತೋಟದಲ್ಲಿ ದುಡಿಯುವ ಮಹಿಳೆಯರ ಮೇಲೆ ವಿಧಿಸಲಾಯಿತು. ಇಲ್ಲಿ ಮಹಿಳಾ ಕಾರ್ಮಿಕರ ಆರ್ಥಿಕ ಸಾಮಾಜಿಕ ಬದುಕಿನ ಮೇಲೆ ಸಾಕಷ್ಟು ಬೆಳಕನ್ನು ಚೆಲ್ಲಿದೆ. ದುಡಿಮೆಯ ಸ್ಥಳದಲ್ಲಿ ಕಾರ್ಮಿಕರ ಶಕ್ತಿಯ ಬಳಕೆ, ಅವರ ದೈಹಿಕ - ಮಾನಸಿಕ ಶಕ್ತಿಯ ಹಿನ್ನೆಲೆ ಅವರ ಕೂಲಿ- ಸೌಲಭ್ಯಗಳ ಸ್ವರೂಪ, ಅವರ ಕ್ಷೇಮಾಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಚರ್ಚಿಸಲಾಗಿದೆ.

ಸಾವಿತ್ರಿ ಅರ್ಪುಟಮುರ್ತಿಯವರು ಬರೆದಿರುವ ವಿಮೆನ್ ವರ್ಕ್ ಅಂಡ್ ಡಿಸ್ಕ್ರಿಮಿನೆಶನ್ ಎಂಬ ಗ್ರಂಥದಲ್ಲಿ ಗ್ರಾಮೀಣ ಪ್ರದೇಶಗಲ್ಲಿ ಲಿಂಗಾಧಾರಿತ ವೇತನ/ಕೂಲಿ ತಾರತಮ್ಯತೆಯು ಸಹಜವಾಗಿದೆ. ಕೃಷಿ ಸಂಬಂಧಿ ಚಟುವಟಿಕೆಗಳಲ್ಲಿ ಮಹಿಳಾ ಕಾರ್ಮಿಕರ ಸ್ಥಿತಿಯನ್ನು ಕುರಿತು ತಿಳಿಸಿದ್ದಾರೆ. ಲೇಖಕರು ಕೃಷಿ ವಲಯದ ಮಾರುಕಟ್ಟೆಯಲ್ಲಿ ಲಿಂಗಾಧಾರಿತ ತಾರತಮ್ಯವನ್ನು ಸೈದ್ಧಾಂತಿಕ ಹಿನ್ನೆಲೆಯಲ್ಲಿ ಚಿತ್ರಿಸಿದ್ದಾರೆ. ಈ ಅಧ್ಯಯನದಲ್ಲಿ ಲಿಂಗಾಧಾರಿತ ವೇತನ / ಕೂಲಿಯು ಪೂರ್ವಗ್ರಹ ಪೀಡಿತ ಕಲ್ಪನೆಗೆ ಒಳಗಾಗಿದೆ. ಎಂಬ ಸಂಗತಿ ವಿವರಿಸಲಾಗಿದೆ.

ಅರ್ಜುನ ಮೈತ್ರರವರು ಬರೆದಿರುವ ವಿಮೆನ್ ಇನ್ ಅ ಚೆನ್ಜಿಂಗ್ಸ ಸೊಸೈಟಿ ಎಂಬ ಗ್ರಂಥದಲ್ಲಿ ಬದಲಾಗುತ್ತಿರುವ ಸಮಾಜದಲ್ಲಿ ಮಹಿಳೆಯರ ಪಾತ್ರವನ್ನು ಕುರಿತು ಚರ್ಚಿಸಲಾಗಿದೆ. ಭಾರತದಲ್ಲಿ ಮಹಿಳೆ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾಳೆ ಅವುಗಳಲ್ಲಿ ಮುಖ್ಯವಾಗಿ ಮಹಿಳಾ ಸಾಕ್ಷರತೆ, ನಗರ ಪ್ರದೇಶದಲ್ಲಿ ದುಡಿಯುವ ಮಹಿಳೆಯರ ಸಮಸ್ಯೆಗಳು,ದುಡಿಯುವ ಸ್ಥಳಗಳಲ್ಲಿ ಮಹಿಳೆಯರ ಲೈಂಗಿಕ ಕಿರುಕುಳ, ವರದಕ್ಷಿಣೆಯಂತಹ ಸಾಮಾಜಿಕ ಸಮಸ್ಯೆಗಳನ್ನು ತಿಳಿಸಲಾಗಿದೆ.

ಆದರೆ ಈಗಿನ ಕಾಲದಲ್ಲಿ ಹಲವಾರು ಮಹಿಳೆಯರು ಮಾಲ್ ಗಳಲ್ಲಿ ದುಡಿಯುತ್ತಿರುವುದು ಮತ್ತು ಅಲ್ಲಿ ಶೋಷಣೆಗೆ ಒಳಗಾಗುತ್ತಿರುವುದರ ಬಗ್ಗೆ ಯಾವುದೇ ಅಧ್ಯಯನಗಳು ನಡೆದಿರುವುದಿಲ್ಲ. ಅವುಗಳ ಬಗ್ಗೆ ಅನೇಕ ಕುತೂಹಲಕಾರಿ ಪ್ರಶ್ನೆಗಳು ಮೂಡುತ್ತದೆ. ಆದುದರಿಂದ ಇದರ ಬಗ್ಗೆ ಒಂದು ವಾಸ್ತವ ಚಿತ್ರಣದ ಅರಿವನ್ನು ಪಡೆಯಲು ಈ ಸಂಶೋದನಾ ಪ್ರಬಂಧವು ಅಗತ್ಯವೆನಿಸುತ್ತದೆ.

ಈ ಅಧ್ಯಯನದಲ್ಲಿ ಮಾಲ್ ಗಳಲ್ಲಿ ದುಡಿಯುವ ಮಹಿಳೆಯರ ಕುರಿತು ಚಿಂತನೆ ವಿಶ್ಲೇಷಣೆ ಮತ್ತು ಸಂಶೋಧನೆಗಳಿಂದ ಕೂಡಿದೆ ಅಧ್ಯಯನವಾಗಿದೆ. ಇದಕ್ಕೆ ಸಂಬಂಧಿಸಿದಂತೆ ನಾವು ಕಂಡುಕೊಳ್ಳಾಬಹುದಾದ ಮುಖ್ಯ ಸಂಶೋಧನಾ ಪ್ರಶ್ನೆಗಳೆಂದರೆ.

- ಮಾಲ್ ಗಳಲ್ಲಿ ದುಡಿಯುವ ಮಹಿಳೆಯರ ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿ ಹೇಗಿದೆ.
- ಮಾಲ್ ಗಳಲ್ಲಿ ದುಡಿಯುವ ಮಹಿಳೆಯರಿಗೆ ಸಮಾಜದಲ್ಲಿ ಸ್ಥಾನಮಾನಗಳೇನು?
- ಮಾಲ್ ಗಳಲ್ಲಿ ದುಡಿಯುವ ಮಹಿಳೆಯರಿಗೆ ಸಿಗುವ ಆದಾಯ ಮತ್ತು ಕೆಲಸದ ಅವಧಿಗಳೆಷ್ಟು?
- ಮಾಲ್ ಗಳಲ್ಲಿ ದುಡಿಯುವ ಮಹಿಳೆಯರು ಈ ವಲಯವನ್ನು ಆಯ್ಕೆ ಮಾಡಿಕೊಂಡಿರುವುದಕ್ಕೆ ಕಾರಣಗಳು?

ಈ ಎಲ್ಲಾ ಮೇಲಿನ ಪ್ರಶ್ನೆಗಳನ್ನು ಗಮನದಲ್ಲಿ ಇಟ್ಟುಕೊಂಡು ಮಂಗಳೂರು ತಾಲೂಕಿನಲ್ಲಿ ಮಾಲ್ ಗಳಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳ ಮಾಹಿತಿಗಳನ್ನು ಪಡೆದು ಈ ಅಧ್ಯಯನದಲ್ಲಿ ವಿಶ್ಲೇಷಣೆ ಮಾಡಲಾಗಿದೆ.

## ೧.೫ ಅಧ್ಯಯನದ ಉದ್ದೇಶಗಳು

ಈ ಅಧ್ಯಯನ ಮುಖ್ಯ ಉದ್ದೇಶವೇನೆಂದರೆ ಮಾಲ್ ಗಳಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳ ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿಯನ್ನು ತಿಳಿದುಕೊಳ್ಳುವುದು. ಮಂಗಳೂರು ತಾಲೂಕಿನಲ್ಲಿ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

೧. ಮಾಲ್ ಗಳಲ್ಲಿ ದುಡಿಯುವ ಮಹಿಳೆಯರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳ ಬಗ್ಗೆ

ಅಧ್ಯಯನ ಮಾಡಲಾಗಿದೆ.

೨. ಮಾಲ್ ಗಳಲ್ಲಿ ದುಡಿಯುವ ಮಹಿಳೆಯರಿಗೆ ಸಮಾಜದಲ್ಲಿ ಸಿಗುವ ಸ್ಥಾನಮಾನಗಳ ಬಗ್ಗೆ ಅಧ್ಯಯನ ಮಾಡಲಾಗಿದೆ.

೩. ಮಾಲ್ ಗಳಲ್ಲಿ ದುಡಿಯುವ ಮಹಿಳೆಯರಿಗೆ ಸಿಗುವ ಆದಾಯ ಮತ್ತು ಕೆಲಸದ ಅವಧಿಯ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ.

೪. ಮಾಲ್ ಗಳಲ್ಲಿ ದುಡಿಯುವ ಮಹಿಳೆಯರು ಈ ವಲಯವನ್ನು ಆಯ್ಕೆ ಮಾಡಿಕೊಂಡಿರುವುದಕ್ಕೆ ಕಾರಣಗಳ ಬಗ್ಗೆ ಅಲೋಕನದ ಪ್ರಯತ್ನ.

## ೧.೬ ಅಧ್ಯಯನ ವಿಧಾನಗಳು

ಮಂಗಳೂರು ತಾಲೂಕಿನ ಮಾಲ್ ಗಳಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳಿಂದ ಮಾಹಿತಿಯನ್ನು ಸಂಗ್ರಹಿಸಲು ಕೆಲವು ವಿಧಾನಗಳನ್ನು ಪಾಲಿಸಲಾಗಿದೆ.ಮಾಹಿತಿ ಸಂಗ್ರಹಣೆಯನ್ನು ಎರಡು ವಿಧಾನಗಳಲ್ಲಿ ಮಾಡಲಾಗಿದೆ.

ಪ್ರಾಥಮಿಕ ಮತ್ತು ಅನುಷಾಂಗಿಕ ವಿಧಾನ ಪ್ರಾಥಾಮಿಕ ವಿಧಾನದಲ್ಲಿ ಮಂಗಳೂರು ತಾಲೂಕಿನ ಮಾಲ್ ಗಳಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳಿಂದ ಪ್ರಶ್ನಾವಳಿ ಮತ್ತು ನೇರ ಸಂದರ್ಶನದ ಮೂಲಕ ಮಾಹಿತಿ ಸಂಗ್ರಹಣೆಯನ್ನು ಮಾಡಲಾಗಿದೆ.

ಅನುಷಾಂಗಿಕ ವಿಧಾನದಲ್ಲಿ ಅಧ್ಯಯನದ ಸೈದಾಂತಿಕ ನೆಲೆಯನ್ನು ಒದಗಿಸಲು ವಿವಿಧ ಗ್ರಂಥಗಳು ಮತ್ತು ಸಂಶೋಧನಾ ಲೇಖನಗಳ ಮೂಲಕ ಪರಾಮರ್ಶೆ ಮಾಡಲಾಗಿದೆ. ಮತ್ತು ಇತ್ತಿಚೇನ ದಿನ ಪತ್ರಿಕೆಗಳು ಮತ್ತು ಅಂತರ್ಜಾಲ ಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

**೧.೭ ಅಧ್ಯಯದ ಇತಿಮಿತಿಗಳು**

ಅಸಂಘಟಿತ ವಲಯದ ಮಾಲ್ ಗಳಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳ ಮಂಗಳೂರು ತಾಲೂಕಿನಲ್ಲಿ ಒಂದು ಅಧ್ಯಯನದ ವ್ಯಾಪ್ತಿಯನ್ನು ಭೌಗೋಳಿಕವಾಗಿ ಕರ್ನಾಟಕ ರಾಜ್ಯದಲ್ಲಿನ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲೂಕಿಗೆ ಸೀಮಿತಗೊಳಿಸಲಾಗಿದೆ.

ಮಂಗಳೂರು ತಾಲೂಕಿನಲ್ಲಿ ಒಟ್ಟು ಜನಸಂಖ್ಯೆಯ ಅರ್ಧದಷ್ಟು ಮಹಿಳೆಯರಿದ್ದು ಇತ್ತೀಚಿನ ದಿನಗಳಲ್ಲಿ ಮಹಿಳೆಯು ಪ್ರತಿಯೊಂದು ಕ್ಷೇತ್ರದಲ್ಲಿಯೂ ತನ್ನನ್ನು ತಾನು ತೊಡಗಿಸಿಕೊಂಡಿದ್ದರೂ ಅಸಂಘಟಿತ ವಲಯದ ಮಾಲ್ ಗಳಲ್ಲಿ ದುಡಿಯುವ ಮಹಿಳೆಯರಿಗೆ ಸಿಗುತ್ತಿರುವ ಸೌಲಭ್ಯಗಳು ಹಾಗೂ ಅಭಿವೃದ್ಧಿಯನ್ನು ಹೆಚ್ಚಿಸುವ ಸಾಧ್ಯತೆಗಳ ಬಗ್ಗೆ ಪರಾಮರ್ಶೆ ನಡೆಸಲು ಪ್ರಸ್ತುತ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ.

**೧.೮ ಅಧ್ಯಯಗಳು**

ಈ ಸಂಶೋಧನಾ ಅಧ್ಯಯನವನ್ನು ಐದು ಮುಖ್ಯ ಅಧ್ಯಯಗಳಾಗಿ ವಿಂಗಡಿಸಲಾಗಿದೆ .

ಮೊದಲನೆಯ ಅಧ್ಯಯದಲ್ಲಿ ಪೀಠಿಕೆ, ಉದ್ದೇಶಗಳು, ಅಧ್ಯಾಯದ ವಿಧಾನಗಳು, ಸಮಸ್ಯೆಗಳ ಬಗ್ಗೆ ವಿವರಣೆ ನೀಡಲಾಗುವುದು.

ಎರಡನೇ ಅಧ್ಯಯದಲ್ಲಿ ಅಸಂಘಟಿತ ವಲಯದ ಸ್ಥೂಲ ಪರಿಚಯ ನೀಡಲಾಗುವುದು.

ಮೂರನೇ ಅಧ್ಯಯದಲ್ಲಿ ಅಸಂಘಟಿತ ನೆಲೆಯಲ್ಲಿ ಆರ್ಥಿಕ ಮತ್ತು ಸಾಮಾಜಿಕ ಅವಲೋಕನ ಮಾಡಲಾಗುವುದು.

ನಾಲ್ಕನೇ ಅಧ್ಯಯದಲ್ಲಿ ಮಂಗಳೂರು ತಾಲೂಕಿನಲ್ಲಿ ಮಾಲ್ಗಳಲ್ಲಿ ದುಡಿಯುವ ಮಹಿಳೆಯರ ಸಮಸ್ಯೆಗಳ ವಿಶ್ಲೇಷಣೆ.

ಐದನೇಯ ಅಧ್ಯಯದಲ್ಲಿ ಸಲಹೆ ಮತ್ತು ಸೂಚನೆಗಳು ಸಂಹಾರ ಕೊಡಲಾಗಿದೆ.

ಈ ಮೊದಲನೆಯ ಅಧ್ಯಯದಲ್ಲಿ ಸಂಘಟಿತ ಮತ್ತು ಅಸಂಘಟಿತ ವಲಯದ ಪರಿಚಯ, ಕಾರ್ಯಕ್ಷೇತ್ರ ಮತ್ತು ಅಧ್ಯಯದ ಬಗ್ಗೆ ವಿವರಣೆಯನ್ನು ಕೊಡಲಾಗಿದ್ದು ಮುಂದಿನ ಅಧ್ಯಯದಲ್ಲಿ ಈ ಅಸಂಘಟಿತ ವಲಯಗಳಲ್ಲಿ ಒಂದಾದ ಮಾಲ್ ಗಳ ಬಗ್ಗೆ ವಿವರಣೆಯನ್ನು ಕೊಡಲಾಗಿದೆ.

## ೧.೯ ಕೊನೆ ಟಿಪ್ಪಣಿ

೧. ವಿಜಯಕುಮಾರಿ ಎಸ್ ಕರಿಕಲ್,ಮಹಿಳೆ ಮತ್ತು ಸಮಾಜ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೭ ಪುಟ ಸಂಖ್ಯೆ ೨೫.

೨. ಐ.ಬಿ.ಐ.ಡಿ. ಪುಟ ಸಂಖ್ಯೆ ೨೬.

೩. ಜಯಶೀಲ , ಶೌಕತ್ ಆಲಿ ಎಂ ಮೇಗಲಮನಿ, ಸುಧಾಕರ ಎಸ್. ಕಿಸಾನ್ ಪಬ್ಲಿಕೇಷನ್ಸ್ ಮಂಗಳೂರು ೨೦೦೭ ಪುಟ ಸಂಖ್ಯೆ ೧೦೩.

೪. ವಿಜಯಕುಮಾರಿ ಎಸ್ ಕರಿಕಲ್,ಮಹಿಳೆ ಮತ್ತು ಸಮಾಜ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೭ ಪುಟ ಸಂಖ್ಯೆ ೨೭.

೫. ಐ.ಬಿ.ಐ.ಡಿ. ಪುಟ ಸಂಖ್ಯೆ ೨೮.

# ಅಧ್ಯಾಯ ೧

## ಅಸಂಘಟಿತ ವಲಯದ ಸ್ಥೂಲ ಪರಿಚಯ

೧.೦. ಅಸಂಘಟಿತ ವಲಯ ಮತ್ತು ಸಂಘಟಿತ ವಲಯದ ವ್ಯತ್ಯಾಸ

೧.೧. ಮಾಲ್ ಗಳಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳು

೧.೨. ಮಾಲ್ ಗಳಲ್ಲಿ ದುಡಿಯುವ ಮಹಿಳೆಯರಿಗೆ ಸಮಾಜದಲ್ಲಿ ಸಿಗುವ ಸ್ಥಾನಮಾನಗಳು

೧.೪. ಮಾಲ್ ಗಳಲ್ಲಿ ದುಡಿಯುವ ಮಹಿಳೆಯರಿಗೆ ಸಿಗುವ ಆದಾಯ ಮತ್ತು ಕೆಲಸದ ಅವಧಿಗಳು

೧.೫.ಮಾಲ್ ಗಳಲ್ಲಿ ದುಡಿಯುವ ಮಹಿಳೆಯರು ಈ ವಲಯವನ್ನು ಆಯ್ಕೆ ಮಾಡಿಕೊಂಡಿರುವುದಕ್ಕೆ ಕಾರಣಗಳು

೧.೬. ಕೊನೆ ಟಿಪ್ಪಣಿ

# ಅಸಂಘಟಿತ ವಲಯದ ಸ್ಥೂಲ ಪರಿಚಯ

ಅಸಂಘಟಿತ ವಲಯ ಎಂದ ತಕ್ಷಣ ಈಗೀನ ಕಾಲದಲ್ಲಿ ಆಂದರೆ ಈ ಮುಂದುವರಿದ ಯುಗದಲ್ಲಿ ಮಾಲ್ ಗಳೇ ಮುಖ್ಯ ಪಾತ್ರ ವಹಿಸುತ್ತದೆ. ಏಕೆಂದರೆ ಈ ಮಾಲ್ ಗಳು ಎಲ್ಲಾರನ್ನು ತನ್ನೆಡೆಗೆ ಆಕರ್ಷಿಸುತ್ತಿದೆ ಆದುದರಿಂದ ಜನರು ಹೆಚ್ಚಾಗಿ ಈ ಮಾಲ್ ಗಳಲ್ಲಿ ದುಡಿಯುತ್ತಿದ್ದಾರೆ ಈ ಅಧ್ಯಯದಲ್ಲಿ ಮಾಲ್ ಗಳಲ್ಲಿ ದುಡಿಯುವ ಮಹಿಳೆಯರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿ ಅವರಿಗೆ ಸಮಾಜದಲ್ಲಿ ಸಿಗುವ ಸ್ಥಾನಮಾನಗಳು ಅವರ ಕೆಲಸದ ಅವಧಿ ಇವುಗಳ ಬಗ್ಗೆ ವಿವರಿಸಲಾಗಿದೆ.

ರಾಷ್ಟ್ರೀಯ ಕೂಲಿ ನೀತಿಯೊಂದು ವಿಭಿನ್ನ ವರ್ಗಗಳ ಹಿತಾಸಕ್ತಿಯನ್ನು ಸಮತೋಲನಗೊಳಿಸುವುದು ಮತ್ತು ಅವುಗಳನ್ನು ಸಾಧ್ಯವಿರುವಷ್ಟು ಮಟ್ಟಿಗೆ ರಾಷ್ಟ್ರೀಯ ಹಿತಾಸಕ್ತಿಗಳೊಂದಿಗೆ ಹೊಂದಿಕೊಳ್ಳುವಂತೆ ಮಾಡುವುದು. ಕೂಲಿ ನೀತಿಯೊಂದು ಆರ್ಥಿಕತೆಯಲ್ಲಿನ ಎಲ್ಲಾ ಬಗೆಯ ಕೂಲಿ ಪಾವತಿಗಳ ಮೇಲೆ ಶಿಸ್ತನ್ನು ವಿಧಿಸುವ ಉದ್ದೇಶ ಹೊಂದಿದೆ. ಈ ಮೂಲಕ ಹೆಚ್ಚುವರಿ, ಕಡಿಮೆ ಅಥವಾ ಅಸಮಂಜಸವಾಗಿ ಕೂಲಿ ಪಾವತಿಸುವುದು ದೇಶದ ರಾಷ್ಟ್ರೀಯ ಅಭಿವೃದ್ಧಿ ಉದ್ದೇಶಗಳಿಗೆ- ಸಾಮಾಜಿಕ ಮತ್ತು ಆರ್ಥಿಕ- ಅಡ್ಡಿಯಾಗುವುದನ್ನು ತಪ್ಪಿಸುವುದಾಗಿದೆ. ಕೆ. ಎನ್. ಸುಬ್ರಮಣ್ಯ ಸಾಮಾನ್ಯವಾಗಿ ಕಾರ್ಮಿಕರನ್ನು ಪರಿಣತಿ ಹೊಂದಿದ ಮತ್ತು ಪರಿಣತಿ ಹೊಂದಿರದ ಕಾರ್ಮಿಕರೆಂದು ವರ್ಗಿಕರಿಸಿದ್ದಾರೆ.[1] ಪರಿಣತಿ ಹೊಂದಿರುವ ಕಾರ್ಮಿಕರು ಅಸಂಘಟಿತರಾಗಿದ್ದಾರೆ. ಪರಿಣತಿ ಹೊಂದಿದ ಕಾರ್ಮಿಕರು ಸಂಘಟಿತ ಮತ್ತು ಅಸಂಘಟಿತ ಸ್ವರೂಪ ಹೊಂದಿರುವುದನ್ನು ಭಾರತದಾದ್ಯಂತ ನಾವು ಕಾಣುತ್ತೇವೆ . ಭಾರತವು ಕೃಷಿ ಪ್ರಧಾನವಾದ ದೇಶವಾಗಿದೆ. ಇಲ್ಲಿ ಸಂಘಟಿತ ವರ್ಗದ ಕಾರ್ಮಿಕರು ಅಸಂಘಟಿತ ವರ್ಗದ ಕಾರ್ಮಿಕರಿಗಿಂತ ಕಡಿಮೆ ಪ್ರಮಾಣದಲ್ಲಿ ಇದ್ದಾರೆ. ಅಸಂಘಟಿತ ವಲಯ ಮತ್ತು ಸಂಘಟಿತ ವಲಯದ ವ್ಯತ್ಯಾಸ, ಮಾಲ್ ಗಳಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳು, ಮಾಲ್ ಗಳಲ್ಲಿ ದುಡಿಯುವ ಮಹಿಳೆಯರಿಗೆ ಸಮಾಜದಲ್ಲಿ ಸಿಗುವ ಸ್ಥಾನಮಾನಗಳು, ಮಾಲ್ ಗಳಲ್ಲಿ ದುಡಿಯುವ ಮಹಿಳೆಯರಿಗೆ ಸಿಗುವ ಆದಾಯ ಮತ್ತು ಕೆಲಸದ ಅವಧಿಗಳು, ಮತ್ತು ಮಾಲ್ ಗಳಲ್ಲಿ ದುಡಿಯುವ ಮಹಿಳೆಯರು ಈ ವಲಯವನ್ನು ಆಯ್ಕೆ ಮಾಡಿಕೊಂಡಿರುವುದಕ್ಕೆ ಕಾರಣಗಳು ಬಗ್ಗೆ ಈ ಅಧ್ಯಯನದಲ್ಲಿ ನಾವು ತಿಳಿಯೋಣ.

## ೧.೧. ಅಸಂಘಟಿತ ವಲಯ ಮತ್ತು ಸಂಘಟಿತ ವಲಯದ ವ್ಯತ್ಯಾಸ

ಭಾರತದಂಥ ವಿಕಾಸಶೀಲ ದೇಶಗಳಲ್ಲಿ ಕಾರ್ಮಿಕರ ಸ್ಥಿತಿಗತಿ ಅಷ್ಟೇನೂ ಉತ್ತಮವಾಗಿಲ್ಲ. ಈ ವಿಕಾಸಶೀಲ ದೇಶಗಳಲ್ಲಿ ಆರ್ಥಿಕತೆಯನ್ನು ಸಂಘಟಿತ ಮತ್ತು ಅಸಂಘಟಿತ ಕ್ಷೇತ್ರಗಳೆಂದು ವರ್ಗೀಕರಿಸುವುದು ವಾಡಿಕೆ. ಸಂಘಟಿತ ಕ್ಷೇತ್ರದಲ್ಲಿ ದುಡಿಯುತ್ತಿರುವ ಕಾರ್ಮಿಕರ ಸ್ಥಿತಿಗತಿ ಪರವಾಗಿಲ್ಲ ಆದರೆ ಅಸಂಘಟಿತ ಕ್ಷೇತ್ರಗಳಲ್ಲಿ ದುಡಿಯುತ್ತಿರುವ ಕಾರ್ಮಿಕರ ಸ್ಥಿತಿಯು ಹೀನಾಯವಾಗಿದೆ. ಅವರು ಅಪಾರವಾದ ಶೋಷಣೆಗೆ ಒಳಗಾಗಿದ್ದಾರೆ.

ಸಂಘಟಿತ ಕ್ಷೇತ್ರದಲ್ಲಿ ಕಾರ್ಮಿಕರ ನೇಮಕಾತಿಯು ಕೆಲವು ನಿಯಮಗಳನ್ನು ಅನುಸರಿಸುತ್ತದೆ. ಅವರ ಅರ್ಹತೆ, ಶಿಕ್ಷಣವನ್ನೆಲ್ಲಾ ಗಮನಿಸಿ ಕಾರ್ಮಿಕರನ್ನು ನೇಮಕಾತಿ ಮಾಡಲಾಗುತ್ತದೆ. ಅಸಂಘಟಿತ ಕ್ಷೇತ್ರದಲ್ಲಿ ಕಾರ್ಮಿಕರನ್ನು ನೇಮಕಾತಿ ನಿಯಮಗಳನ್ನು ಅನುಸರಿಸುವುದಿಲ್ಲ.

ಸಂಘಟಿತ ಕ್ಷೇತ್ರದ ಉದ್ಯಮಗಳು ಸರಕಾರಕ್ಕೆ ತೆರಿಗೆಯನ್ನು ಕಡ್ಡಾಯವಾಗಿ ಕಟ್ಟುತ್ತದೆ. ಆದರೆ ಅಸಂಘಟಿತ ಕ್ಷೇತ್ರದ ಉದ್ಯಮಗಳು ಸರಕಾರಕ್ಕೆ ತೆರಿಗೆಯನ್ನು ಪಾವತಿಸುವುದಿಲ್ಲ.

ಸಂಘಟಿತ ವಲಯದಲ್ಲಿ ಅಂತಾರಾಷ್ಟ್ರೀಯ ಕಾರ್ಮಿಕ ಸಂಘಟನೆಯು ಕಾರ್ಮಿಕರ ಹಿತರಕ್ಷಣೆಗಾಗಿ ರೂಪಿಸಿರುವ ಎಲ್ಲಾ ಕಾರ್ಮಿಕ ಮಾನದಂಡಗಳನ್ನೂ ಅದರ ಸದಸ್ಯ ದೇಶಗಳು ಕಾನುನುಗಳನ್ನಾಗಿ ಪರಿವರ್ತಿಸುತ್ತವೆ. ಆದ್ದರಿಂದ ಕಾರ್ಮಿಕರಿಗೆ ಸಂಘಟಿತ ಕ್ಷೇತ್ರಗಳಲ್ಲಿ ಅಪಾರವಾದ ರಕ್ಷಣೆಯಿದೆ. ಆದರೆ ಅಸಂಘಟಿತ ವಲಯದಲ್ಲಿ ಕಾರ್ಮಿಕರಿಗೆ ಯಾವುದೇ ನೀತಿಯ ರಕ್ಷಣೆಯಿರುವುದಿಲ್ಲ.

ಸಂಘಟಿತ ಕ್ಷೇತ್ರವೆಂದರೆ ಸರಕಾರದ ಕೈಗಾರಿಕೆ ಮತ್ತು ಕಾರ್ಮಿಕ ಕಲ್ಯಾಣ ಇಳಾಖೆಯಲ್ಲಿ ನೊಂದಾಯಿಸಲ್ಪಟ್ಟ ಉದ್ಯಮಗಳೆಂದರ್ಥ. ಈ ಉದ್ಯಮ ಘಟಕಗಳ ಸರಕಾರಕ್ಕೆ ಕಾರ್ಪೋರೆಟ್ ಮತ್ತು ಮಾರಾಟ ತೆರಿಗೆಯನ್ನು ಪಾವತಿಸುತ್ತವೆ. ಕಾರ್ಮಿಕ ನೇಮಕಾತಿ ಮತ್ತು ಕಲ್ಯಾಣ ನೀತಿಗಳನ್ನು ಅನುಸರಿಸುವುದು ಇಂಥ ಯಾವುದೇ ಸರಕಾರಿ ಆರ್ಥಿಕ ನೀತಿ ನಿಯಮಾವಳಿಗಳನ್ನು ಅನುಸರಿಸದ ಸಣ್ಣ ಮತ್ತು ಅತಿ ಸಣ್ಣ ಉದ್ಯಮ ಘಟಕಗಳು ಸೇರಿ ಅಸಂಘಟಿತ ಅಥವಾ ಅನೌಪಚಾರಿಕ ಕ್ಷೇತ್ರವೆನಿಸುತ್ತದೆ.

ಸಂಘಟಿತ ವಲಯಗಳಲ್ಲಿ ಉತ್ಪಾದಕರು ಸರಕಾರ ರೂಪಿಸಿದ ಕಾರ್ಮಿಕ ಕಲ್ಯಾಣ ನೀತಿಯನ್ನು ಅನುಸರಿಸುತ್ತಾರೆ. ಇದರಿಂದ ಕಾರ್ಮಿಕರ ಜೀವನವು ಉತ್ತಮವಾಗಿರುತ್ತದೆ.ಅಸಂಘಟಿತ ಕ್ಷೇತ್ರದಲ್ಲಿ ಕಾರ್ಮಿಕ ಕೂಲಿ ಮತ್ತು ಇತರೆ ಪಾವತಿಗಳಿಗೆ ಸಂಬಂಧಿಸಿದಂತೆ ಅಸಂಘಟಿತ ಕ್ಷೇತ್ರದ ಉತ್ಪಾದಕರು ಸರಕಾರ ರೂಪಿಸಿದ ಕಾರ್ಮಿಕ ಕಲ್ಯಾಣ ನೀತಿಯನ್ನು ಅನುಸರಿಸುವುದಿಲ್ಲ.

ಸಂಘಟಿತ ವಲಯದಲ್ಲಿ ಯಾವುದೇ ರೀತಿಯ ಲಿಂಗ ತಾರತಮ್ಯ ಮಾಡಲಾಗುವುದಿಲ್ಲ. ಇಲ್ಲಿ ಗಂಡು ಹೆಣ್ಣು ಇಬ್ಬರಿಗೂ ಸಮಾನವಾದ ವೇತನವನ್ನು ನೀಡಲಾಗುತ್ತದೆ. ಅಸಂಘಟಿತ ವಲಯದಲ್ಲಿ ಕೂಲಿ ವ್ಯತ್ಯಯಗಳಿವೆ. ಅಸಂಘಟಿತ ಕ್ಷೇತ್ರದ ಉದ್ಯಮಗಳು ಲಿಂಗ ತಾರತಮ್ಯವನ್ನು ವ್ಯಾಪಕವಾಗಿ ಅನುಸರಿಸುತ್ತವೆ.

ಸಂಘಟಿತ ವಲಯದಲ್ಲಿ ದುಡಿಯಲು ಕಾರ್ಮಿಕರು ಸಾಮಾನ್ಯವಾಗಿ ಸುಶಿಕ್ಷಿತರು. ಇವರಿಗೆ ಕಾರ್ಮಿಕ ಸುರಕ್ಷೆ ಮತ್ತು ಕಲ್ಯಾಣ ಕಾನೂನುಗಳ ಸ್ಪಷ್ಟ ಅರಿವಿದೆ. ಆದುದರಿಂದ ವಿದ್ಯಾವಂತ ಕಾಮಿಕರನ್ನು ಶೋಷಿಸುವುದು ಅಷ್ಟೇನು ಸುಲಭವಲ್ಲ. ಅಸಂಘಟಿತ ವಲಯದಲ್ಲಿ  ಸರಕಾರದ ಕನಿಷ್ಠ ಕೂಲಿ, ಮಾತೃತ್ವ ಸಂರಕ್ಷಣೆ ಕಾಯಿದೆ ಜಾರಿಗೊಳ್ಳುತ್ತಿಲ್ಲ. ಈ ಕಾಯಿದೆಗಳನ್ನು ಉದ್ಯಮಗಳು ಸಂಪೂರ್ಣವಾಗಿ ಉಲ್ಲಂಘಿಸುತ್ತಿದ್ದರೂ ಕಾರ್ಮಿಕ ಕಲ್ಯಾಣ ಇಲಾಖೆ ಯಾವುದೇ ಕ್ರಮ ತೆಗೆದುಕೊಳ್ಳುತ್ತಿಲ್ಲ.

ಅಸಂಘಟಿತ ಕ್ಷೇತ್ರದ ಉದ್ಯಮಗಳಲ್ಲಿ ದುಡಿಯುವ ಮಹಿಳೆಯರ ಮೇಲೆ ವಿಭಿನ್ನ ಬಗೆಯ ಲೈಂಗಿಕ ಪೀಡನೆಗಳು ಮತ್ತು ಅತ್ಯಾಚಾರಗಳು ನಡೆದಿವೆ, ನಡೆಯುತ್ತಿವೆ. ಇಂಥ ಪ್ರಯತ್ನಗಳು ಸಹೋದ್ಯೋಗಿ ಪುರುಷ ಕಾರ್ಮಿಕರಿಂದ ಮತ್ತು ಮಾಲಿಕರಿಂದ, ಅವರ ಕುಟುಂಬದ ಪುರುಷ ಸದಸ್ಯರಿಂದ ಉಂಟಾಗುತ್ತವೆ. ಮಹಿಳಾ ಕಾರ್ಮಿಕರ ವಿರುದ್ಧ ನಡೆಯುವ ಲೈಂಗಿಕ ಕಿರುಕುಳ ಮತ್ತು ಅತ್ಯಾಚಾರಗಳ ಪ್ರಕರಣಗಳು ದಾಖಲಾಗುವುದಿಲ್ಲ, ಬೆಳಕಿಗೆ ಬರುವುದಿಲ್ಲ.ಏಕೆಂದರೆ ಬಡ ಮಹಿಳೆಯರು ಮಾನ ಮರ್ಯಾದೆಗೆ ಅಂಜಿಕೊಂಡು, ವಿವಾಹದ ಭದ್ರತೆ ಕಾಯ್ದುಕೊಳ್ಳಲು ತಮ್ಮ ವಿರುದ್ಧದ ಲೈಂಗಿಕ ಅತ್ಯಾಚಾರಗಳ ಬಗ್ಗೆ ಪೊಲೀಸರಿಗೆ ದೂರು ಕೊಡುವುದಿಲ್ಲ. ಇದು ಬಡ ಅನಕ್ಷರಸ್ಥ ಮಹಿಳೆಯರ ವಿರುದ್ಧ ನಡೆಯುವ ಅಮಾನವೀಯ ಕ್ರೂರ ಹೇಯ ಕೃತ್ಯಗಳಾಗಿವೆ. ಸಂಘಟಿತ ವಲಯದಲ್ಲಿ ಲೈಂಗಿಕ ಪೀಡನೆಗಳು ಮತ್ತು ಅತ್ಯಾಚಾರಗಳು ನಡೆಯುವುದು ಬಹಳ ವಿರಳ ಯಾಕೆಂದರೆ ಅವರು ಅಕ್ಷರಸ್ಥರೂ ಹಾಗು ತಿಳುವಳಿಕೆಯುಳ್ಳವರೂ ಆಗಿರುತ್ತಾರೆ.

ಕೊನೆಯದಾಗಿ ಸಂಘಟಿತ ಮತ್ತು ಅಸಂಘಟಿತ ವಲಯಗಳು ಎರಡು ಚಕ್ರದಂತೆ ನಮ್ಮ ಸಮಾಜದಲ್ಲಿ ಕಾರ್ಯವನ್ನು ಮಾಡುತ್ತಾ ಬಂದಿದೆ. ಇದರಿಂದ ಜನರ ಮತ್ತು ದೇಶದ ಆರ್ಥಿಕತೆಯು ಉತ್ತಮಗೊಳ್ಳುತ್ತಿದೆ. ಸರಕಾರವು ಸಂಘಟಿತ ವಲಯಕ್ಕೆ ಕೊಟ್ಟಂತಹ ಸೌಕರ್ಯಗಳನ್ನು ಅಸಂಘಟಿತ ವಲಯಕ್ಕೂ ಕೊಟ್ಟರೆ ದೇಶದ ಆರ್ಥಿಕತೆಯ ಅಭಿವೃದ್ಧಿ ಸಾಧಿಸುವಲ್ಲಿ ಸಂಶಯವಿಲ್ಲ.

## ೧.೨. ಮಾಲ್ ಗಳಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳು

ಮಾಲ್ ಗಳಲ್ಲಿ ದುಡಿಯುವ ಮಹಿಳೆಯರಿಗೆ ಹೆಚ್ಚು ರಕ್ಷಣೆಯಿಲ್ಲ ಇವರು ಹತ್ತು ಹಲವು ಸಲ ವಿವಿಧ ಶೋಷಣೆಗಳಿಗೆ ಗುರಿಯಾಗುತ್ತಾರೆ. ಈ ಸತ್ಯವು ಕೆಳಕಂಡ ಸಂಗತಿಗಳಿಂದ ಸ್ಪಷ್ಟವಾಗುತ್ತದೆ.

- ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರಿಗೆ ವೃತ್ತಿ ಭದ್ರತೆಯಿಲ್ಲ ಕೂಲಿ ವ್ಯತ್ಯಯಗಳಿವೆ ಯಾಕೆಂದರೆ ಅಲ್ಲಿ ಲಿಂಗ ತಾರತಮ್ಯವನ್ನು ವ್ಯಾಪಕವಾಗಿ ಅನುಸರಿಸುತ್ತಾರೆ.

- ಸರಕಾರದ ಕನಿಷ್ಠ ಕೂಲಿ ಕಾಯಿದೆ ಮಾತೃತ್ವ ಸಂರಕ್ಷಣೆ ಕಾಯಿದೆ ಮಾಲ್ ಗಳಂತ ಅಸಂಘಟಿತ ವಲಯಗಳಲ್ಲಿ ಜಾರಿಗೊಳ್ಳುತ್ತಿಲ್ಲ. ಈ ಕಾಯಿದೆಗಳನ್ನು ಉದ್ಯಮಗಳು ಸಂಪೂರ್ಣವಾಗಿ ಉಲ್ಲಂಘಿಸುತ್ತಿದ್ದರು ಕಾರ್ಮಿಕ ಕಲ್ಯಾಣ ಇಲಾಖೆ ಯಾವುದೇ ಕ್ರಮ ಕೈಗೊಳ್ಳುತ್ತಿಲ್ಲ.

- ಮಾಲ್ ಗಳಂತಹ ಅಸಂಘಟಿತ ವಲಯದ ಮಹಿಳಾ ಕಾರ್ಮಿಕರಿಗೆ ಬೋನಸ್ಸು, ರಜೆಗಳು, ರಜೆ ನಗದೀಕರಣ, ವೈದ್ಯಕೀಯ ಸೌಲಭ್ಯ, ಕಡಿಮೆ ಬೆಲೆಗೆ ಆಹಾರ ಸೌಲಭ್ಯ ಇತ್ಯಾದಿ ಹೆಚ್ಚುವರಿ ಸೌಲಭ್ಯಗಳನ್ನು ನೀಡಲಾಗುತ್ತಿಲ್ಲ.

- ಮಾಲ್ ಗಳಂತಹ ಅಸಂಘಟಿತ ವಲಯದಲ್ಲಿ ದುಡಿಯುವವರು ಆರ್ಥಿಕ ಶೋಷಣೆಗೆ ಒಳಗಾಗುವ ಒಂದುಕಾರಣವಿದೆ. ಅದೆಂದರೆ ಅವುಗಳ ಮಾಲಕರು ಕಾರ್ಮಿಕರಿಗೆ ಸರಕಾರ ನಿಗದಿಪಡಿಸಿದ ಕೂಲಿಗಳನ್ನು, ಇತರ ಕಲ್ಯಾಣ ಸೌಲಭ್ಯಗಳನ್ನುನೀಡುತ್ತಿಲ್ಲ.

- ಮಾಲ್ ಗಳಂತಹ ಅಸಂಘಟಿತ ವಲಯಗಳ ಉದ್ದಿಮೆಗಳಲ್ಲಿ ದುಡಿಯುವ ಕಾರ್ಮಿಕರು ಸಾಮಾನ್ಯವಾಗಿ ಶಿಕ್ಷಿತರಾದರು. ಇವರು ಕಾರ್ಮಿಕ ಸುರಕ್ಷೆ ಮತ್ತು ಕಲ್ಯಾಣ ಕಾನೂನುಗಳ ಸ್ಪಷ್ಟ

ಅರಿವಿಲ್ಲ ಅರಿವಿದ್ದರು ಅದರ ಬಗ್ಗೆ ತಲೆ ಕೆಡಿಸಿಕೊಳ್ಳುವುದಿಲ್ಲ.. ಆದುದರಿಂದ ಇಂತಹ ಕಾರ್ಮಿಕರನ್ನು ಶೋಷಿಸುವುದು ಸುಲಭದ ಕೆಲಸವಾಗಿದೆ.

- ಮಾಲ್ ಗಳಂತಹ ಅಸಂಘಟಿತ ವಲಯದಲ್ಲಿ ಕಾರ್ಮಿಕರಿಗೆ ಸಂಘ ರಚಿಸುವ, ಅವುಗಳ ಸದಸ್ಯರಾಗುವ, ಮುಷ್ಕರ ನಡೆಸುಲು ಸಾಧ್ಯವಾಗುತ್ತಿಲ್ಲ ಹಾಗೇನಾದರೂ ಮಾಡಿದರೆ ಉದ್ಯಮಶೀಲನಿಗೆ ಅವರನ್ನು ಕೆಲಸದಿಂದ ತೆಗೆದುಹಾಕುವ ಸಾವುಥ್ಯವಿರುತ್ತದೆ. ಕಾರ್ಮಿಕರು ತಮ್ಮ ಹೊಟ್ಟೆಪಾಡಿಗಾಗಿ ಇದೆಲ್ಲವನ್ನೂ ಸಹಿಸಿಕೊಂಡು ಹೋಗಬೇಕಾಗುತ್ತದೆ.

- ಮಾಲ್ ಗಳಂತಹ ಅಸಂಘಟಿತ ವಲಯದ ಉದ್ಯಮಗಳಲ್ಲಿ ದುಡಿಯುವ ಮಹಿಳೆಯರ ಮೇಲೆ ವಿಭಿನ್ನ ಬಗೆಯ ಲೈಂಗಿಕ ಪೀಡನೆಗಳು ಮತ್ತು ಅತ್ಯಾಚಾರಗಳು ನಡೆದಿದೆ, ನಡೆಯುತ್ತಿವೆ. ಇಂಥ ಪ್ರಯತ್ನಗಳು ಸಹೋದ್ಯೋಗಿ ಪುರುಷ ಕಾರ್ಮಿಕರಿಂದ ಅಥವಾ ಮಾಲೀಕರಿಂದ ಉಂಟಾಗುತ್ತವೆ. ಮಹಿಳಾ ಕಾರ್ಮಿಕರ ವಿರುದ್ಧ ನಡೆಯುವ ಲೈಂಗಿಕ ಕಿರುಕುಳ ಮತ್ತು ಅತ್ಯಾಚಾರಗಳ ಪ್ರಕರಣಗಳು ದಾಖಲಾಗುವುದಿಲ್ಲ.  ಬೆಳಕಿಗೆ ಬರುವುದಿಲ್ಲ ಏಕೆಂದರೆ ಬಡಮಹಿಳೆಯರು ಮಾನ ಮರ್ಯಾದೆಗೆ ಅಂಜಿಕೊಂಡು, ವಿವಾಹದ ಭೃದ್ರತೆ/ ಸ್ಥಿರತೆ  ಕಾಯ್ದುಕೊಳ್ಳಲು ತಮ್ಮವಿರುದ್ಧದ ಲೈಂಗಿಕ ಅತ್ಯಾಚಾರಗಳ  ಬಗ್ಗೆ  ಪೊಲೀಸರಿಗೆ ದೂರು ಕೊಡುವುದಿಲ್ಲ. ಇದು ಬಡ ಮಹಿಳೆಯರ ವಿರುದ್ಧ ನಡೆಯುವ ಅಮಾನವೀಯ ಕ್ರೂರ ಹೇಯ ಕೃತ್ಯಗಳಾಗಿವೆ. ಈ ಲೈಂಗಿಕ ದೌರ್ಜನ್ಯದಿಂದ ಮಹಿಳಾಕಾರ್ಮಿಕರು ಸಂರಕ್ಷಣೆ ಪಡೆಯಲು ವಿಫಲರಾಗಿದ್ದಾರೆ.

- ಮಾಲ್ ಗಳಂತಹ ಅಸಂಘಟಿತ ವಲಯದ ಕಾರ್ಮಿಕರು ವಿದ್ಯಾವಂತರಾದರು  ಅವರು ಯಾವುದೇ ರೀತಿಯ ಕಾರ್ಯ ಕೌಶಲ್ಯವನ್ನು ಸರಿಯಾಗಿ ಹೊಂದಿರುವುದಿಲ್ಲ. ಅಥವಾ ಹೊಂದಿದ್ದರು ಅದಕ್ಕೆ ಸರಿಯಾದ ಕೆಲಸಸಿಕ್ಕಿರುವುದಿಲ್ಲ ಇವರಿಗೆ ಯಾವುದೇ ರೀತಿಯ ಶಿಕ್ಷಣ ಅಥವಾ ತರಬೇತಿಯನ್ನು ಕೊಡಲಾಗಿರುವುದಿಲ್ಲ. ಆದುದರಿಂದ ಅವರು ಕಡಿಮೆ ಕೌಶಲ್ಯತೆಯನ್ನು ಹೊಂದಿರುವ ಕಾರ್ಮಿಕರು ಎಂದು ಪರಿಗಣಿಸಲಾಗುತ್ತದೆ.

- ಮಾಲ್ ಗಳಂತಹ ಅಸಂಘಟಿತ ವಲಯದ ಕಾಮಿಕರು ಯಾವುದೇ ಕೆಲಸವನ್ನು ದೀರ್ಘಕಾಲದವರೆಗೆ ಮಾಡುವುದಿಲ್ಲ ಎಂದರೆ ಸಾಮಾನ್ಯವಾಗಿ ಅವರು ಬೇರೆ ಉದ್ಯೋಗ ಸಿಗದೇ ಈ ಉದ್ಯೋಗವನ್ನು ಅರಿಸಿಕೊಂಡಿರುತ್ತಾರೆ ಹಾಗಾಗಿ . ಅವರು ವೃತ್ತಿಯನ್ನು ಆಗಾಗ ಬದಲಾಯಿಸುತ್ತಿರುತ್ತಾರೆ. ಇದರಿಂದ ಅವರಲ್ಲಿ ಸ್ಥಿರತೆಯ ಕೊರತೆಯನ್ನು ಕಾಣಬಹುದು.

- ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರ ವೇತನವು ನಿಗದಿತವಾಗಿ ಕಡಿಮೆಯಾಗಿರುತ್ತದೆ. ಅಧಿಕವಿದ್ದರು ಅದಕ್ಕಾಗಿ ಅಧಿಕ ಸಮಯ ಶ್ರಮಪಡಬೇಕಾಗುತ್ತದೆ. ಇದರಿಂದ ಅವರು ಕೇವಲ ದೈನಂದಿನ ಖರ್ಚುವೆಚ್ಚಗಳ ಬಗ್ಗೆ ಮಾತ್ರ ಚಿಂತಿಸುತ್ತಿರುತ್ತಾರೆ. ಅವರಲ್ಲಿ ಹೂಡಿಕೆಯು ಇರುವುದಿಲ್ಲ. ಅದನ್ನು ಕೇವಲ ತಮ್ಮ ವೈಯಕ್ತಿಕ ಸಮಸ್ಯೆಗಳಿಗೆ ಮಾತ್ರ ಉಪಯೋಗಿಸಲು ಅವರಿಗೆ ಅವಕಾಶವಿರುತ್ತದೆ.

- ಮಾಲ್ ಗಳಂತಹ ಅಸಂಘಟಿತ ವಲಯದ ಕಾರ್ಮಿಕರ ಆದಾಯವು ಸಿಮಿತವಾಗಿರುವುದರಿಂದ ದುಬಾರಿ ಮನೆ ಬಾಡಿಗೆ ನೀಡಿ ವಾಸಿಸಲು ಸಾಧ್ಯವಾಗುವುದಿಲ್ಲ. ಮೂಲ ಸೌಕರ್ಯಗಳಿಲ್ಲದ ವಸತಿಗಳಲ್ಲಿ ವಾಸಿಸುತ್ತಿದ್ದಾರೆ. ನೀರಿನ ಪೂರೈಕೆ ನೈರ್ಮಲ್ಯವಿಲ್ಲದ ಪರಿಸರದಲ್ಲಿ ವಾಸಿಸುವ ಅನಿವಾರ್ಯತೆ ಇವರಿಗೆ ಏರ್ಪಟ್ಟಿದೆ. ಆದುದರಿಂದ ಅನಾರೋಗ್ಯಾಗಳಿಗೆ ಒಳಗಾಗುವ ಸಂಭವಗಳು ಹೆಚ್ಚಾಗಿರುತ್ತದೆ.

- ಮಾಲ್ ಗಳಂತಹ ಅಸಂಘಟಿತ ವಲಯದ ಕಾರ್ಮಿಕರಿಗೆ ಜೀವನ ನಿರ್ವಹಣೆಯು ಕಷ್ಟವಾಗಿರುವುದರಿಂದ ಮಕ್ಕಳಿಗೆ ಉತ್ತಮ ವಿದ್ಯಾಭ್ಯಾಸ ನೀಡಲು ವಿಫಲರಾಗಿರುತ್ತಾರೆ. ಮಕ್ಕಳ ಮೇಲ್ವಿಚಾರಣೆ ಮತ್ತು ವಿದ್ಯಾಭ್ಯಾಸದ ಕುರಿತು ಗಮನ ನೀಡಲು ಅಸಮರ್ಥರಾಗಿರುತ್ತಾರೆ ಕಾನೂನು ಬಾಹಿರ ಚಟುವಟಿಕೆಯನ್ನು ತೊಡಗಿರುವ ವ್ಯಕ್ತಿಗಳು ಇಂತಹ ಮಕ್ಕಳನ್ನು ದುರುಪಯೋಗ ಪಡಿಸಿಕೊಂಡು ಸಮಾಜ ಬಾಹಿರ ಚಟುವಟಿಕೆಯಲ್ಲಿ ತೊಡಗುವಂತೆ ಮಾಡುತ್ತಾರೆ.

- ಮಾಲ್ ಗಳಂತಹ ಅಸಂಘಟಿತ ವಲಯದ ಮಹಿಳೆಯರು ಕೆಲವು ಸಂದರ್ಭದಲ್ಲಿ ಉದ್ಯೋಗದಾತರ ಶೋಷಣೆ ಮತ್ತು ಸಹಕಾರ್ಮಿಕರಿಂದ ಹಾಗೂ ಉದ್ಯೋಗದಾತರ ಒತ್ತಡದಿಂದ ಅನೈತಿಕ ಪಥವನ್ನು ತುಳಿಯಬೇಕಾದ ಸನ್ನಿವೇಶಗಳು ಏರ್ಪಡುತ್ತವೆ.

- ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕ ಗ್ರಾಹಕರಿಂದಲೂ ತೊಂದರೆಗಳನ್ನು ಅನುಭವಿಸುತ್ತಾರೆ ಆದರೆ ಅವುಗಳನ್ನು ಹೇಳಿಕೊಳ್ಳಲಾಗದೆ ಕಷ್ಟ ಪಡುತ್ತಾರೆ ಏಕೆಂದರೆ ಮಾಲಕರಿಗೆ ಗ್ರಾಹಕರೇ ದೇವರು.

- ದಿನವಿಡಿ ನಿಂತುಕೊಂಡು, ನೆಲದಲ್ಲಿ ಕುಳಿತು ಅಥವಾ ಬಗ್ಗಿಕೊಂಡು ಕೆಲಸ ಮಾಡುವುದರಿಂದ ಆರೋಗ್ಯದ ಸಮಸ್ಯೆಗಳನ್ನು ಅನುಭವಿಸಬೇಕಾಗುತ್ತದೆ.

ಈ ಎಲ್ಲಾ ವಿಷಯಗಳಿಂದ ತಿಳಿಯುವುದೇನೆಂದರೆ ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರ ಸ್ಥಿತಿಗತಿ ಅಷ್ಟೇನೂ ಉತ್ತಮವಾಗಿಲ್ಲ. ಇಂಥ ಕ್ಷೇತ್ರದಲ್ಲಿ ದುಡಿಯುವ ಕಾರ್ಮಿಕರ ಹಿತಾಸಕ್ತಿಗಳಿಗೆ ವಿರೋಧವಾಗಿದೆ. ಇಲ್ಲಿ ಕಾರ್ಮಿಕರನ್ನು ಅನೇಕ ವಿಧಗಳಲ್ಲಿ ಶೋಷಿಸಲಾಗುತ್ತದೆ. ಈ ವಿಶ್ಲೇಷಣೆಯು ಭಾರತಕ್ಕೆ ಸ್ಪಷ್ಟವಾಗಿ ಅನ್ವಯಿಸುತ್ತದೆ. ಮಾಲ್ ಗಳಂತಹ ಅಸಂಘಟಿತ ವಲಯದ ಪರವಾಗಿ ಕಾನುನುಗಳಿವೆ. ಸಂವಿಧಾನದಲ್ಲಿ ಕೆಲವು ಹಕ್ಕುಗಳನ್ನು ನೀಡಬೇಕೆಂದು ಕಾರ್ಮಿಕರು ಕೇಳಿದಾಗ ಅವರ ಪರವಾಗಿ ಇದೆ ಎಂದು ಹೇಳಲಾದ ಯಾವ ಕಾನೂನುಗಳೂ ಅವರ ಸಹಾಯಕ್ಕೆ ಬರುವುದಿಲ್ಲ. ಇಂದು ಈ ನಾಡಿನ ಅಸಂಘಟಿತ ವಲಯದ ಕಾರ್ಮಿಕರ ಸಂಕಷ್ಟವು ಭೀಕರವಾಗಿದೆ.

### ೧.೩. ಮಾಲ್ ಗಳಲ್ಲಿ ದುಡಿಯುವ ಮಹಿಳೆಯರಿಗೆ ಸಮಾಜದಲ್ಲಿ ಸಿಗುವ ಸ್ಥಾನಮಾನಗಳು

ಭಾರತದಲ್ಲಿ ಮಹಿಳಾ ಕಾರ್ಮಿಕರು ತೀರಾ ಕೆಳಮಟ್ಟದ ಸಾಮಾಜಿಕ-ಆರ್ಥಿಕ ಸ್ಥಾನಮಾನವನ್ನು ಅನುಭವಿಸುತ್ತಿದ್ದಾರೆ. ದೇಶದ ಸಂವಿಧಾನವು ಮಹಿಳೆ ಮತ್ತು ಪುರುಷರಿಗೆ ಸಮಾನ ಸ್ಥಾನಮಾನ ನೀಡಿದೆ. ಆದರೂ ಅವರ ನಡುವೆ ತೀರಾ ಹೆಚ್ಚಿನ ಮಟ್ಟದ ತಾರತಮ್ಯವು ಈಗಲೂ ಇದೆ

ಭಾರತದಲ್ಲಿ ಮಹಿಳಾ ಕಾರ್ಮಿಕರ ಭಾಗವಹಿಸುವಿಕೆಯ ದರ ಪುರುಷ ಕಾರ್ಮಿಕರಿಗಿಂತ ತೀರಾ ಕೆಳಮಟ್ಟದಲ್ಲಿದೆ. ಮಹಿಳಾ ಶ್ರಮಿಕರ ಸರಾಸರಿ ದಿನಗೂಲಿ ಗಳಿಕೆಯು ಪುರುಷ ಶ್ರಮಿಕರಿಗಿಂತ ತುಂಬಾ ಕಡಿಮೆಯಿದೆ, ಇದಕ್ಕೆ ಕಾರಣಗಳೆಂದರೆ ಪುರುಷ ಪಕ್ಷಪಾತ, ಅನಕ್ಷರತೆ, ಕಡಿಮೆ ದಕ್ಷತೆ, ಶೋಷಣೆ ಇತ್ಯಾದಿ

ಭಾರತದ ಮಹಿಳ ಕಾರ್ಮಿಕರು ಅಸಂಘಟಿತರು, ಅವರು ಅನಕ್ಷರಸ್ಥರು, ಅಜ್ಞಾನಿಗಳು, ಚದುರಿದವರು ಮತ್ತು ಸಂಪ್ರದಾಯವಾದಿಗಳು ಆಗಿರುವುದರಿಂದ ಸಂಘಟಿತರಾಗಲು ಸಾಧ್ಯವಾಗುತ್ತಿಲ್ಲ.

ಅಸಂಘಟಿತ ವಲಯದ ಮಹಿಳ ಕಾರ್ಮಿಕರು ಶಿಕ್ಷಣ ಮತ್ತು ತರಬೇತಿಯ ಕೊರತೆಯಿಂದಾಗಿ ಬಹುತೇಕಮಹಿಳಾ ಕಾರ್ಮಿಕರು ಅಪರಿಣತರಾಗಿದ್ದಾರೆ. ಇವರ ಫಲವಾಗಿ ಅವರು ಭಾರೀ ಶೋಷಣೆಗೆ ಒಳಗಾಗುತ್ತಿದ್ದಾರೆ.

ಅಸಂಘಟಿತ ವಲಯದ ಮಹಿಳಾ ಕಾರ್ಮಿಕರು ತೀರಾ ಕೆಳ ಸಾಮಾಜಿಕ ಸ್ಥಾನಮಾನ ಪಡೆದಿದ್ದಾರೆ. ಭಾರತೀಯ ಸಮಾಜದಲ್ಲಿ ಮಹಿಳೆಯರ ಬಗೆಗೆ ತೀರಾ ಕೀಳು ಕಲ್ಪನೆಗಳಿವೆ. ಇದು ಸಮಾಜಕ್ಕೆ ಅವರ ಪೂರ್ಣ ಕೊಡುಗೆಯನ್ನು ವಿರೂಪಗೊಳಿಸಿದೆ.

ಮಹಿಳೆಯರು ಸಾಮಾನ್ಯವಾಗಿ ಅಪೌಷ್ಟಿಕತೆಯಿಂದ ಬಳಲುತ್ತಾರೆ. ಅಪೌಷ್ಟಿಕತೆಯ ತಾಯಂದಿರು ದುರ್ಬಲ ಮತ್ತು ಅನಾರೋಗ್ಯಕರ ಶಿಶುವಿಗೆ ಜನನನೀಡುವುದಲ್ಲದೆ ಅಂತಹ ಶಿಶುಗಳನ್ನು ಸಾಕಿ ಸಲಹಲು ಸಮಸ್ಯೆಗಳನ್ನು ಎದುರಿಸುತ್ತಾರೆ. ಅಪೌಷ್ಟಿಕತೆಯಿಂದಾಗಿ ಮಹಿಳಾ ಶ್ರಮಿಕರ ಆರೋಗ್ಯ ಮತ್ತು ದಕ್ಷತೆ ಕುಂದಿದೆ.

ಅಸಂಘಟಿತ ಮಹಿಳಾ ಕಾರ್ಮಿಕರ ದಕ್ಷತೆ ತೀರಾ ಕಡಿಮೆಯಿದೆ. ಅವರ ಉತ್ಪಾದಕತೆ ಕೂಡ ಕಡಿಮೆ. ಶಿಕ್ಷಣ, ತರಬೇತಿಗಳ ಅಭಾವ, ಅನಾರೋಗ್ಯ ಇತ್ಯಾದಿಗಳು ಕಡಿಮೆ ದಕ್ಷತೆಗೆ ಕಾರಣವಾಗಿವೆ.

ಭಾರತದ ಮಹಿಳಾ ಕಾರ್ಮಿಕರು ಉದ್ಯೋಗ ಸಂಚಲನ ತೀರಾ ಕೆಳಮಟ್ಟದಲ್ಲಿದೆ. ಮಹಿಳೆಯರು ಸತತವಾಗಿ ಗರ್ಭಿಣಿಯರಾಗಿ ಅಥವಾ ತಾಯಿಯಾಗಿ ಶಿಶು ಪಾಲನೆಯಲ್ಲಿ ನಿರತರಾಗಿರುವುದರಿಂದ ಮನೆಯಿಂದ ಹೊರಗೆ ಹೆಚ್ಚೇನೂ ಪಾತ್ರ ನಿರ್ವಹಿಸಲಾಗುವುದಿಲ್ಲ. ಇದು ಅವರ ಔದ್ಯೋಗಿಕ ಮತ್ತು ಅಂತಸ್ತನ್ನು ಕುಂಠಿತಗೊಳಿಸಿದೆ.

ಲಿಂಗ ಪಕ್ಷಪಾತ ಅಥವಾ ತಾರತಮ್ಯವು ಭಾರತೀಯ ಮಹಿಳಾ ಕಾರ್ಮಿಕರು ಎದುರಿಸುತ್ತಿರುವ ಇನ್ನೊಂದು ಸಮಸ್ಯೆಯಾಗಿದೆ. ಜೀವನದ ಎಲ್ಲಾ ರಂಗಗಳಲ್ಲೂ ಅವರು ಪುರುಷರ ಎದುರು ತಾರತಮ್ಯಕ್ಕೆ ಒಳಗಾಗುತ್ತಿದ್ದಾರೆ.ಅವರನ್ನು ಮಕ್ಕಳನ್ನು ಹೆರುವ ಯಂತ್ರ ಎಂದು ಪರಿಗಣಿಸಿ ಅಡುಗೆ ಕೋಣೆಯ ನಾಲ್ಕು ಗೋಡೆಗಳ ನಡುವೆ ಬಂಧಿಸಲಾಗಿದೆ. ಶಿಕ್ಷಣ ಮತ್ತು ಉದ್ಯೋಗಗಳೆರಡರಲ್ಲೂ ಅವರು ಲಿಂಗ ತಾರತಮ್ಯ ಎದುರಿಸುತ್ತಿದ್ದಾರೆ.

ಈ ಮಹಿಳಾ ಕಾರ್ಮಿಕರು ಹತ್ತು ಹಲವು ವಿಧದ ಶೋಷಣೆಗೆ ಗುರಿಯಾಗುತ್ತಿದ್ದಾರೆ ಸತ್ಯವು ಮೇಲೆ ಕಂಡ ಸಂಗತಿಗಳಿಂದ ಸ್ಪಷ್ಟಗೊಳ್ಳುವುದು. ಇಂಥ ಶೋಷಣೆಯ ವಿರುದ್ಧ ಭಾರತದ ಮಹಿಳಾ ಕಾರ್ಮಿಕರು ಸಂಘಟಿತ ಹೋರಾಟ ನಡೆಯಬೇಕಾಗಿದೆ.

ಮಾಲ್ ಗಳಂತಹ ಅಸಂಘಟಿತ ವಲಯದ ದುಡಿಮೆಯು ಈ ಆಧುನಿಕ ಯುಗದಲ್ಲಿ ಬಹಳ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತಿದೆ ಯಾಕೆಂದರೆ ದೇಶದ ಅಭಿವೃದ್ಧಿಯಲ್ಲಿ ಜನ ಸಂಖ್ಯೆಯ ಪಾತ್ರವು ಬಹಳ ಮುಖ್ಯವಾದುದು ಪ್ರತಿಯೊಬ್ಬ ವ್ಯಕ್ತಿ ಅನುಕೂಲಸ್ಥನಾಗಿರುವುದಿಲ್ಲ. ನಮ್ಮ ದೇಶ ಬಡಜನರಿಂದ ಕೂಡಿದೆ. ಅವರು ಅವಿಧ್ಯಾವಂತರಾಗಿದ್ದಾರೆ. ಇಂತವರು ತಮ್ಮ ಜೀವನದ ಅಗತ್ಯತೆಗಳನ್ನು ಈಡೇರಿಸಲು ಅಸಂಘಟಿತ ವಲಯವು ಬಹಳ ಮುಖ್ಯವಾದ ಪಾತ್ರವನ್ನು ವಹಿಸುತ್ತದೆ. ಅಸಂಘಟಿತ ವಲಯದ ಪ್ರಾಮುಖ್ಯತೆಯನ್ನು ಕೆಳಗೆ ವಿವರಿಸಲಾಗಿದೆ. ಆರ್ಥಿಕ ಅಭಿವೃದ್ಧಿಯಲ್ಲಿ ಅಸಂಘಟಿತ ವಲಯದಿಂದ ನಿರುದ್ಯೋಗ ಸಮಸ್ಯೆಯು ಕಡಿಮೆಯಾಗಿದೆ. ಇದರಲ್ಲಿ ಮಾಲಿಕರು ಲಾಭಕ್ಕಿಂತ ತಮ್ಮ ಜೀವನಕ್ಕೆ ಬೇಕಾದ ಅಗತ್ಯತೆಗಳ ಬಗ್ಗೆ ಹೆಚ್ಚು ಪ್ರಾಮುಖ್ಯತೆಯನ್ನು ಅಸಂಘಟಿತ ಕೊಡುತ್ತಾರೆ. ಉದಾಹರಣೆಗೆ ಮಕ್ಕಳ ವಿದ್ಯಾಭ್ಯಾಸಕ್ಕೆ ಕೌಟುಂಬಿಕ ಸಮಸ್ಯೆಗಳಿಗೆ.

ರಾಷ್ಟ್ರೀಯ ಉತ್ಪಾದನೆಗೆ ಮಾಲ್ ಗಳಂತಹ ಅಸಂಘಟಿತ ವಲಯವು ಬಹು ಮುಖ್ಯ ಕೊಡುಗೆಯನ್ನು ಕೊಟ್ಟಿದ್ದರು ಈ ಅಸಂಘಟಿತ ವಲಯವು ಸಾಮಾಜಿಕವಾಗಿ ಪ್ರಾಮುಖ್ಯತೆಯನ್ನು ಪಡೆದಿಲ್ಲ ಏಕೆಂದರೆ ಜನರು ಮಾಲ್ ಗಳತಹ ಅಸಂಘಟಿತ ವಲಯದ ದುಡಿಮೆಗಾರನ್ನು ಕೀಳಾಗಿ ಕಾಣುತ್ತಾರೆ. ಅವರಿಗೆ ಸಮಾಜದಲ್ಲಿ ಒಳ್ಳೆಯ ಸ್ಥಾನಮಾನ ಲಭಿಸುವುದಿಲ್ಲ. ಕೆಲವೊಮ್ಮೆ ಮನೆಯವರ ಸಹಕಾರವೇ ಸಿಗುವುದು ಕಷ್ಟ.

## ೨.೪. ಮಾಲ್ ಗಳಲ್ಲಿ ದುಡಿಯುವ ಮಹಿಳೆಯರಿಗೆ ಸಿಗುವ ಆದಾಯ ಮತ್ತು ಕೆಲಸದ ಅವಧಿಗಳು

ಸಾಮಾನ್ಯವಾಗಿ ಅಸಂಘಟಿತ ವಲಯದಲ್ಲಿ ದುಡಿಯುವವರ ವೇತನವು ತುಂಬಾ ಕಡಿಮೆ ಏಕೆಂದರೆ ಇಲ್ಲಿ ಸಂಘಟಿತ ವಲಯಗಳಲ್ಲಿ ಉತ್ಪಾದಕರು, ಸರಕಾರ ರೂಪಿಸಿದ ಕಾರ್ಮಿಕ ಕಲ್ಯಾಣ ನೀತಿಯನ್ನು ಅನುಸರಿಸುದಿಲ್ಲ. ಆದರೆ ಮಾಲ್ ಗಳಲ್ಲಿ ದುಡಿಯುವ ಕಾರ್ಮಿಕರಿಗೆ ಇರತ ಕಾರ್ಮಿಕರಿಗೆ ದೊರೆಯುವ ವೇತನಕ್ಕಿಂತ ಸ್ವಲ್ಪ ಜಾಸ್ತಿ ಇದ್ದರು ಇವರ ಸ್ಥಿತಿಯು ಶೋಷಣೆಯಾ ಇವರು ಆ ವೇತನಕ್ಕಾಗಿ ದಿನವಿಡೀ ದುಡಿಯಬೇಕು ಇವರಿಗೆ ಯಾವುದೇ ಬಿಡುವು ಇರುವುದಿಲ್ಲ. ದಿನವಿಡೀ ನಿಂತುಕೊಂಡು, ಬಗ್ಗಿಕೊಂಡು ನೆಲದಮೇಲೆ ಕುಳಿತುಕೊಂಡು ದುಡಿಯುವ ಇವರು ಹಲವಾರು ಅನಾರೋಗ್ಯಗಳಿಗೆ ತುತ್ತಾಗುತ್ತಾರೆ.

ಇವರಿಗೆ ಯಾವುದೇ ಸರ್ಕಾರಿ ರಜೆಗಳಾಗಲೀ ಭಾನುವಾರದ ರಜೆಗಳಾಗಲಿ ಸಿಗುವುದು ಕಷ್ಟ ವರ್ಷವಿಡಿ ದುಡಿದರು ಯಾವುದೇ ಉಳಿತಾಯ ಮಾಡಲು ಸಾಧ್ಯವಾಗುವುದಿಲ್ಲ ಏಕೆಂದರೆ ಇವರ ಆದಾಯದಿಂದ ಇವರ ಮನೆ ನಡೆಯುತ್ತದೆ.ಇವೆಲ್ಲವೂ ಅಲ್ಲದೆ ವೇತನ ಪಾವತಿಯಲ್ಲಿಯು ಲಿಂಗತಾರತಮ್ಯವು ಕಾಣುತ್ತೇವೆ.ಮಹಿಳೆ ಪುರುಷರಿಗೆ ಸಮವಾಗಿ ದುಡಿದರು ಅಲ್ಲದೆ ಅವರಿಗಿಂತ ಜಾಸ್ತಿ ಕಷ್ಟ ಪಟ್ಟು ದುಡಿದರು ಅವಳಿಗೆ ಸಿಗುವ ವೇತನ ಪುರುಷನಿಗಿಂತ ಕಡಿಮೆಯೇ

ಹೀಗೆ ವರ್ಷವಿಡಿ ದುಡಿಯುವ ಮಹಿಳೆ ದುಡಿದ ಹಣವನ್ನು ತನ್ನ ಅವಶ್ಯಕತೆಗಳನ್ನು ಪೂರೈಸಲು ಉಪಯೋಗಿಸಲು ಸಾಧ್ಯವಾಗದೆ ಕಷ್ಟ ಪಡುತ್ತಲೇ ಇದ್ದಾಳೆ. ತಾನು ಪಡೆಯುವ ವೇತನಕ್ಕಿಂತ ಜಾಸ್ತಿ ದುಡಿಯುವ ಮಹಿಳೆ ಇಂತಹ ಶೋಷನೆಗಳನ್ನು ಎದುರಿಸುವಂತಹ ಸ್ಥಿತಿಯಲ್ಲಿಯೂ ಇಲ್ಲ. ಅಲ್ಲದೆ ಅವರಿಗೆ ಬೇರೆ ಯಾವುದೇ ರೀತಿಯ ಸೌಲಭ್ಯಗಳು ಇಲ್ಲಿ ದೊರೆಯುದಿಲ್ಲ.

ಇತ್ತೀಚಿನ ದಿನಗಳಲ್ಲಿ ಮಹಿಳೆಯರು ಕೆಲಸಕ್ಕಾಗಿ ಸುತ್ತುತ್ತಿರುತ್ತಾರೆ. ಅವರುಗಳಿಗೆ ಬೇಕಾದ ಕೆಲಸ ಸಿಗಲಿಲ್ಲವೆಂದು ನಿರಾಸೆಯಿಂದ ಮಾಲ್ ಗಳತಹ ಅಸಂಘಟಿತ ವಲಯದಲ್ಲಿ ದುಡಿಯಲು ಸಿದ್ಧರಾಗುತ್ತಾರೆ. ಇಂತಹ ದುಡಿಮೆಯನ್ನು ತಿರಸ್ಕರಿಸುವ ಮನೋಭಾವ ಕಡಿಮೆಯಿರುತ್ತದೆ.ಇದನ್ನು ಅರಿತ ಮಾಲಿಕರು ಮಹಿಳೆಯರ ಶ್ರಮವನ್ನು ಕಡಿಮೆ ವೇತನಕ್ಕೆ ನೆಮಿಸಿಕೊಳ್ಳುತ್ತಾರೆ ಜೊತೆಗೆ ಅವರು ಕೆಲಸದ ಮಧ್ಯೆ ವೇತನಕ್ಕಾಗಿ ಮಾಲಿಕರೊಡನೆ ತರ್ಕ ಮಾಡುವುದಿಲ್ಲ. ಬಹಳ ಬೇಗವಾಗಿ ಮಾಲಿಕರ ಬೇಡಿಕೆಗೆ

ಅನುಗುಣವಾಗಿ ನಡೆದುಕೊಳ್ಳುವವರಾಗಿರುತ್ತಾರೆ.ಅಲ್ಲದೆ ಕಡಿಮೆ ಸಂಬಳದ ಕಾನೂನಿನ ತೊಡಕಿಲ್ಲದ ರೀತಿಯಲ್ಲಿ ದುಡಿಸಿಕೊಳ್ಳುವ ಜಾಣ್ಮೆಯನ್ನು ಮಾಲೀಕರು ರೂಡಿಸಿಕೊಂಡಿರುತ್ತಾರೆ.ಕುಟುಂಬದ ಆರ್ಥಿಕ ಒತ್ತಡವನ್ನು ಮಾಲೀಕರು ಉಪಯೋಗಿಸಿಕೊಂಡು ಮಹಿಳಾ ಕಾರ್ಮಿಕರನ್ನು ಬಳಸಿಕೊಳ್ಳುತ್ತಾರೆ.

**೨.೫. ಮಾಲ್ ಗಳಲ್ಲಿ ದುಡಿಯುವ ಮಹಿಳೆಯರು ಈ ವಲಯವನ್ನು ಆಯ್ಕೆ ಮಾಡಿಕೊಂಡಿರುವುದಕ್ಕೆ ಕಾರಣಗಳು**

೧. ಸಾಮಾನ್ಯವಾಗಿ ಹೆಣ್ಣುಮಕ್ಕಳನ್ನು ಅವರು ವಾಸಿಸುವ ಸ್ಥಳಗಳಿಂದ ಹೊರತುಪಡಿಸಿ ಬೇರೆ ಸ್ಥಳಗಳಿಗೆ ಕೆಲಸಮಾಡಲು ಕಳುಹಿಸುದಿಲ್ಲ. ಅವರ ಚಲನೆಯ ಮೇಲೆ ನಿರ್ಬಂಧವು ಅವರು ತಾವು ವಾಸಿಸುವ ಸ್ಥಳದಲ್ಲೇ ಸಿಗುವಂತಹ ಕಡಿಮೆ ಕೂಲಿ ಕಡಿಮೆ ಕೌಶಲ್ಯದ ಋತುಮಾನಕ್ಕನುಸರವಾಗಿ ನಿರಂತರ ದುಡಿಮೆ ನಿರೀಕ್ಷಿಸದ ಕೆಲಸಗಳಲ್ಲಿ ತೊಡಗುತ್ತಾರೆ.

೨. ದುಡಿಯುವ ಮಹಿಳೆಯರ ವಯೋಮಿತಿಯನ್ನು ತೆಗೆದುಕೊಂಡರೆ ಸಾಮಾನ್ಯವಾಗಿ ೧೫-೪೦ ವರ್ಷದ ಮಹಿಳೆಯರು ದುಡಿಮೆಯಲ್ಲಿ ತೊಡಗಿರುವುದು ಕಂಡುಬರುತ್ತದೆ. ಈ ವಯಸ್ಸು ಅವರ ಸಂತನೋತ್ಪತ್ತಿಯ ಅವಧಿಯು ಆಗಿರುತ್ತದೆ. ಸಂತಾನೋತ್ಪತ್ತಿ ಹಾಗು ಕುಟುಂಬದ ಜವಾಬ್ದಾರಿ ಅವರನ್ನು ಹೊರಗಡೆ ನಿರಂತರ ನಿಯಮಿತ ಕೆಲಸಗಳಲ್ಲಿ ತೊಡಗಲು ಬಿಡುದಿಲ್ಲ. ತಮ್ಮ ಅನುಕೂಲಕ್ಕೆ ತಕ್ಕಂತೆ ಕೆಲಸಗಳಲ್ಲಿ ತೊಡಗುತ್ತಾರೆ ಅದು ಲಭ್ಯವಿರುವುದು ಮಾಲ್ ಗಳಂತಹ ಅಸಂಘಟಿತ ವಲಯಗಳಲ್ಲಿ.

೩. ಶಿಕ್ಷಣ, ತರಬೇತಿ ಹಾಗು ಕೌಶಲ್ಯದ ಕೊರತೆಯಿಂದ ಮಹಿಳೆಯರು ಸಂಘಟಿತ ವಲಯಗಳಲ್ಲಿರುವ ಸ್ಪರ್ಧಾತ್ಮಕ ಕೆಲಸಗಳನ್ನು ಪಡೆಯುವುದು ಕಷ್ಟವಾಗುತ್ತದೆ. ಅವಕಾಶಗಳು ಕಡಿಮೆಯಾಗುತ್ತದೆ. ಮೇಲಿನ ಅಪೇಕ್ಷೆಗಳನ್ನು ನಿರೀಕ್ಷಿಸದ ಮಾಲ್ ಗಳಂತಹ ಅಸಂಘಟಿತ ವಲಯ ಸುಲಭವಾಗಿ ಮಹಿಳೆಯರನ್ನು ತನ್ನತ್ತ ಸೆಳೆಯುತ್ತದೆ ಅಥವಾ ಮಹಿಳೆಯರು ಸುಲಭವಾಗಿ ಆ ವಲಯವನ್ನು ಪ್ರವೇಶಿಸುತ್ತಾರೆ.

೪. ಸಂಘಟಿತ ವಲಯಗಳನ್ನು ಪ್ರವೇಶಿಸಲಾಗದೆ ಆಂದರೆ ಅಲ್ಲಿಯ ಕಡ್ಡಾಯ ಮತ್ತು ಅಪೇಕ್ಷಣೀಯ ಪೂರೈಕೆಗಳನ್ನು, ಸಾಕ್ಷರತೆ ಕನಿಷ್ಠ ವಿದ್ಯಾರ್ಹತೆ ಅನುಭವ ಕಾರ್ಯಕ್ಷಮತೆ ಕೌಶಲ್ಯ ತರಬೇತಿಗಳನ್ನು ಪೂರೈಸಲಾಗದೆ ಮಾಲ್ ಗಳಂತಹ ಅಸಂಘಟಿತ ವಲಯಕ್ಕೆ ಹೋಗುತ್ತಾರೆ. ಅದು ತೆಗೆದುಕೊಳ್ಳುವ

ದೀರ್ಘಸಮಯ ಲಿಖಿತ ಪರೀಕ್ಷೆ ಸಂದರ್ಶನ ಮತ್ತು ಇತರ ಪ್ರಕ್ರಿಯೆಗಳಿಗೆ ಕಾಯಲು ಸಾಧ್ಯವಾಗದೆ ತಕ್ಷಣ ಸಿಗುವ ಹಂಗಾಮಿ ಅಥವಾ ಗುತ್ತಿಗೆ ಆಧಾರದ ಕೆಲಸಗಳಲ್ಲಿ ತೊಡಗುತ್ತಾರೆ.

೫. ಮಹಿಳೆಯರು ಶ್ರಮದ ಬೇಡಿಕೆ ಮತ್ತು ಪೂರೈಕೆಯನ್ನು ತೆಗೆದುಕೊಂಡರೆ ಪೂರೈಕೆ ಅಧಿಕವಾಗಿರುವುದರಿಂದ ಬೇಡಿಕೆ ಕಡಿಮೆಯಾಗುತ್ತದೆ. ಬೇಡಿಕೆ ಕಡಿಮೆಯಾದಾಗ ಅವರ ಚೌಕಾಶಿ ಶಕ್ತಿಯು ಕಡಿಮೆಯಾಗಿ ಕೌಶಲ್ಯ ರಹಿತ ಕೆಲಸಗಳಲ್ಲಿ ಮಾಲ್ ಗಳಂತಹ ಅಸಂಘಟಿತ ವಲಯದಲ್ಲಿ ಕಡಿಮೆ ಕೂಲಿಗೆ ದುಡಿಯಬೇಕಾಗುತ್ತದೆ.

೬. ಸರ್ಕಾರದ ಕೃಷಿ ನೀತಿ ಭೂ ಕಾಯಿದೆ ಪರಿಸರ ನಾಶ ಆರ್ಥಿಕ ಹಾಗು ಅಭಿವೃದ್ಧಿ ಕಾರ್ಯನೀತಿ ಯೋಜನೆ ಹಾಗು ಚಟುವಟಿಕೆಗಳು ಜನರನ್ನು ಭೂರಹಿತರನ್ನಾಗಿ ಮಾಡುತ್ತದೆ. ಸ್ಥಳಾಂತರಗೊಳಿಸುತ್ತದೆ. ನಿರುದ್ಯೋಗಿಗಳನ್ನಾಗಿಸಿ ಬಡತನಕ್ಕೆ ತಳ್ಳುತ್ತದೆ ಇವುಗಳಿಂದ ಹೆಚ್ಚು ಸಂಕಷ್ಟಕ್ಕೊಳಗಾಗುವ ಮಹಿಳೆಯರು ದುಡಿಯುವುದು ಅನಿವಾರ್ಯವಾಗಿ ಯಾವುದೇ ಕೆಲಸ ಮಾಡುಲು ಮುಂದಾಗಿ ಮಾಲ್ ಗಳಂತಹ ಅಸಂಘಟಿತ ವಲಯಗಳಲ್ಲಿ ದುಡಿಯುತ್ತಾರೆ.

೭. ಇತ್ತೀಚಿನ ತಂತ್ರಜ್ಞಾನ ಬೆಳೆವಣಿಗೆ ಆದುನೀಕರಣ, ಹೊಸ ಆರ್ಥಿಕ ನೀತಿ ಜಾಗತೀಕರಣ ಮಹಿಳೆಯರನ್ನು ಮಾಲ್ ಗಳಂತಹ ಅಸಂಘಟಿತ ವಲಯಕ್ಕೆ ತಳ್ಳುತ್ತಿವೆ.

ಈ ಅಧ್ಯಾಯವು ಮಾಲ್ ಗಳಲ್ಲಿ ದುಡಿಯುವ ಮಹಿಳೆಯರ ಬಗ್ಗೆ ಪೂರ್ಣ ವಿವರಣೆಯನ್ನು ನೀಡಿದ್ದು ಅವರು ಎದುರಿಸುತ್ತಿರುವ ಸಮಸ್ಯೆಗಳನ್ನು ವಿವರಿಸಿದ್ದು ಈ ಸಮಸ್ಯೆಗಳಿಗೆ ಕೈಗೊಂಡ ಕ್ರಮಗಳ ಬಗ್ಗೆ ಮುಂದಿನ ಅಧ್ಯಾಯದಲ್ಲಿ ನೀಡಲಾಗಿದೆ.

## ೧.೬ ಕೊನೆ ಟಿಪ್ಪಣಿ

೧. ಹೇಮಲತಾ ಎಚ್. ಎಂ. ಮಹಿಳಾ ಅಧ್ಯಯನ ೨ ಮಹಿಳೆ ಮತ್ತು ದುಡಿಮೆ ಮಹಿಳಾಭಿವೃದ್ಧಿ ಕಾರ್ಯ ನೀತಿ ಹಾಗು ಯೋಜನೆಗಳು ,ಡಿ.ವಿ.ಕೆ. ಮೂರ್ತಿ ಪ್ರಕಾಶಕರು , ಮೈಸೂರು ೨೦೦೫ ಪುಟ ಸಂಖ್ಯೆ ೨೯.

# ಅಧ್ಯಾಯ ೩.

## ಅಸಂಘಟಿತ ನೆಲೆಯಲ್ಲಿ ಆರ್ಥಿಕ ಮತ್ತು ಸಾಮಾಜಿಕ ಅವಲೋಕನ

೩.೧. ಮಾಲ್ ಗಳಂತಹ ಅಸಂಘಟಿತ ಕಾರ್ಮಿಕ ವಲಯದ ಸುಧಾರಣೆ

೩.೨. ಅಸಂಘಟಿತ ವಲಯದ ಸೇವಾ ಭದ್ರತೆಗೆ ಕೈಗೊಳ್ಳುವ ಕಾರ್ಯಕ್ರಮಗಳು

೩.೩. ಕಾರ್ಮಿಕ ಸಂಘ ಮತ್ತು ಮಹಿಳೆಯರು

೩.೪. ಮಹಿಳಾ ಸಬಲೀಕರಣ ಮತ್ತು ಅಸಂಘಟಿತ ಮಹಿಳಾ ಕಾರ್ಮಿಕರು

೩.೫. ಕೊನೆ ಟಿಪ್ಪಣಿ

# ಅಸಂಘಟಿತ ನೆಲೆಯಲ್ಲಿ ಆರ್ಥಿಕ ಮತ್ತು ಸಾಮಾಜಿಕ ಅವಲೋಕನ

ಅಸಂಘಟಿತ ವಲಯವಾದ ಮಾಲ್ ಗಳಲ್ಲಿ ದುಡಿಯುವ ಮಹಿಳೆಯರ ಸಮಸ್ಯೆಗಳನ್ನು ತಿಳಿದುಕೊಂಡರೆ ಸಾಲದು ಆ ಸಮಸ್ಯೆಗಳಿಗೆ ಈಗಾಗಲೇ ಕೈಗೊಂಡಿರುವ ಕ್ರಮಗಳ ಬಗ್ಗೆ ವಿವರಣೆಯನ್ನು ಈ ಅಧ್ಯಯದಲ್ಲಿ ನೀಡಲಾಗಿದೆ. ಮಹಿಳೆಯರ ಸ್ಥಾನವನ್ನು ಉತ್ತಮಪಡಿಸುವುದು, ಅವರನ್ನು ಸಮಾನತೆಯತ್ತ ಕೊಂಡೊಯ್ಯುವುದು.ಹಾಗು ಸಶಕ್ತಗೊಳಿಸುವುದು ಸರ್ಕಾರದ, ಅಭಿವೃದ್ಧಿ ಸಂಸ್ಥೆಗಳು ಹಾಗು ಸರ್ಕಾರೇತರ ಸಂಸ್ಥೆಗಳ ಗುರಿಯಾಗಿದ್ದರೆ ಅವುಗಳ ಗಮನ ಮೊದಲು ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವ ಈ ಮಹಿಳೆಯರ ಮೇಲೆ ಕೇಂದ್ರೀಕೃತವಾಗಬೇಕು. ದುಡಿಮೆಗೆ ಸಂಬಂಧಿಸಿದ ಕಾಯಿದೆಗಳ ಕಟ್ಟುನಿಟ್ಟಿನ ಜಾರಿಯಾಗಬೇಕು. ಸರಕಾರದ ಕಡೆಯಿಂದ ಸಾಮಾಜಿಕ ಭದ್ರತೆಯ ಕಾರ್ಯರೂಪವಾಗಬೇಕು, ಜಾಗತೀಕರಣ ಹಾಗು ಖಾಸಗೀಕರಣದ ಸವಾಲುಗಳನ್ನು ಎದುರಿಸಲು ಮಹಿಳೆಯರನ್ನು ಸನ್ನದ್ಧರನ್ನಾಗಿ ಮಾಡಬೇಕು. ಸ್ವಯಂ ಉದ್ಯೋಗಿಗಳಾಗಿ ಸಂಘಟಿತರಾಗಬೇಕು ಮತ್ತು ಅವರ ಇಬ್ಬಗೆಯ ಹೊರೆಯನ್ನು ಕಡಿಮೆ ಮಾಡಲು ಕೌಟುಂಬಿಕ ಸಾಮಾಜಿಕ ರಚನೆಗಳಲ್ಲಿ ಬದಲಾವಣೆ ತರಬೇಕು ಅದಕ್ಕಾಗಿ ಕೆಲವು ನೀತಿ ನಿಯಮಗಳು ಜಾರಿಯಾಗಬೇಕು ಅಲ್ಲದೆ ಜಾರಿಯಾಗಿರುವ ನಿಯಮಗಳ ಬಗ್ಗೆ ಅರಿವು ಮೂಡಿಸಬೇಕು. ಅದಕ್ಕಾಗಿ ಕೈಗೊಂಡಿರುವ ಕ್ರಮಗಳನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

**೩.೧. ಅಸಂಘಟಿತ ಕಾರ್ಮಿಕ ವಲಯದ ಸುಧಾರಣೆ**

ಭಾರತದ ಕಾರ್ಮಿಕ ಕಾನೂನುಗಳು ನಮ್ಯವಲ್ಲ. ಅವುಗಳು ಅತ್ಯಂತ ಪೈಪೋಟಿಯುಕ್ತ ಮಾರುಕಟ್ಟೆಯಲ್ಲಿ ಕಾರ್ಯನಿರ್ವಹಿಸಬೇಕಾದ ಉದ್ಯಮಗಳಿಗೆ ಅವಕಾಶವಿರುವ ನಮ್ಯತೆಯನ್ನು ಒದಗಿಸಿಕೊಟ್ಟಿಲ್ಲ. ವಾಸ್ತವವಾಗಿ ಅವುಗಳ ಹೊಸ ಉದ್ಯೋಗಾವಕಾಶಗಳ ನಿರ್ಮಾಣಕ್ಕೆ ಅವಕಾಶ ನೀಡುತ್ತಿಲ್ಲ. ಪ್ರಸ್ತುತ ಅಸ್ತಿತ್ವದಲ್ಲಿರುವ ಕಾರ್ಮಿಕ ಕಾನೂನುಗಳು ವ್ಯವಹಾರ ಮರುಹೊಂದಾಣಿಕೆ ಮತ್ತು ಮರು ಸಂಘಟನೆಯು ಪ್ರಕ್ರಿಯೆಗೆ ತೊಡಕಾಗಿ ಪರಿಣಮಿಸಿವೆ. ಆದ್ದರಿಂದ ಕಾರ್ಮಿಕ ಮಾರುಕಟ್ಟೆಯಲ್ಲಿ ಸುಧಾರಣಾ ಕ್ರಮಗಳನ್ನು ಪರಿಚಯಿಸುವ ಮತ್ತು ಕಾರ್ಮಿಕ ಕಾನೂನುಗಳಿಗೆ ತಿದ್ದುಪಡಿ ತಂದು ಅವುಗಳನ್ನು ಇತರ ರಾಷ್ಟ್ರಗಳ ಕಾನೂನು ಕ್ರಮಗಳ ಆಚರಣೆಗಳಿಗೆ ಸಮಗೊಳಿಸಬೇಕಾದ ಕಾಲ ಸನ್ನಿವೇಶವಾಗಿದೆ.

## ಎರಡನೇ ರಾಷ್ಟ್ರೀಯ ಕಾರ್ಮಿಕ ಆಯೋಗ

ಎರಡನೇ ರಾಷ್ಟ್ರೀಯ ಕಾರ್ಮಿಕ ಆಯೋಗವನ್ನು ರವಿಂದ್ರ ವರ್ಮ ಅವರ ಅಧ್ಯಕ್ಷತೆಯ ಜಾಗತೀಕರಣ ಹಾಗು ವ್ಯಾಪಾರ ಮತ್ತು ಕೈಗಾರಿಕೆಯ ಉದಾರೀಕರಣದಿಂದ ಉದ್ಭವವಾದ ಹೊಸ ವಾತಾವರಣವನ್ನು ಪರಿಶೀಲಿಸಬೇಕೆಂದು ಆಶಿಸಲಾಯಿತು. [1]

## ಪ್ರಸ್ತಾವನೆಯ ಷರತ್ತುಗಳು

ಎನ್. ಸಿ. ಎಲ್. ನ ಪ್ರಸ್ತಾವನೆಯ ಪ್ರಮುಖ ಷರತ್ತುಗಳು ಈ ಮುಂದಿನಂತಿವೆ.

- ಅಸಂಘಟಿತ ವಲಯದ ಕಾರ್ಮಿಕರಿಗೆ ಕನಿಷ್ಠ ಮಟ್ಟದ ರಕ್ಷಣೆಯನ್ನು ನೀಡಲು ಒಂದು ರಕ್ಷಣಾ ಕಾನೂನನ್ನು ಸಲಹೆ ಮಾಡುವುದು, ಮತ್ತು
- ಅದು ತನ್ನ ಶಿಫಾರಸುಗಳ ಚೌಕಟ್ಟನ್ನು ಅಭಿವೃದ್ಧಿಪಡಿಸುವ ವೇಳೆಯಲ್ಲಿ ಕನಿಷ್ಠ ಮಟ್ಟದ ಕಾರ್ಮಿಕ ರಕ್ಷಣೆ ಮತ್ತು ಕ್ಷೇಮಾಭ್ಯುದಯದ ಕ್ರಮಗಳು ಹಾಗೂ ಅವುಗಳ ಕಾರ್ಯಗತಕ್ಕೆ ಒಂದು ಮೂಲ ಸಾಂಸ್ಥಿಕ ಚೌಕಟ್ಟನ್ನು ಒದಗಿಸುವತ್ತ ಗಮನಹರಿಸಬೇಕೆಂದು ಆಶಿಸಲಾಯಿತು.

## ಪ್ರಮುಖ ಶಿಫಾರಸುಗಳು

ಆಯೋಗವು ತನ್ನ ಅಂತಿಮ ವರದಿಯನ್ನು ೨೦೦೨ ಜೂನ್ ೨೯ರಂದು ಸಲ್ಲಿಸಿತು ಅವರ ಪ್ರಮುಖ ಶಿಫಾರಸುಗಳು ಈ ಮುಂದಿನಂತಿವೆ.

i. ಕಾರ್ಮಿಕರನ್ನು ಕೆಲಸದಿಂದ ವಜಾಗೊಳಿಸುವುಕ್ಕೆ ತೆಗೆದು ಹಾಕುವುದಕ್ಕೆ ಯಾವುದೇ ಪೂರ್ವನುಮತಿಯ ಅಗತ್ಯವಿಲ್ಲ.

ii. ಯಾವುದೇ ವೇತನ ಮಂಡಳಿಯ ಅಗತ್ಯವಿಲ್ಲ.

iii. ರಜಾದಿನಗಳ ಸಂಖ್ಯೆಯನ್ನು ವರ್ಷಕ್ಕೆ ಐದು ದಿನಗಳಿಗೆ ಮತ್ತು ನಿರ್ಬಂಧಿತ ರಜೆಯನ್ನು ೧೦ ದಿನಗಳಿಗೆ ಸೀಮಿತಗೊಳಿಸಬೇಕು

iv. ಮುಖ್ಯ ಉತ್ಪಾದನೆ ಅಥವಾ ಸೇವೆಗಳಲ್ಲಿ ಗುತ್ತಿಗೆ ಶ್ರಮ ಇರಬಾರದು.

v. ೧೦ ಕ್ಕಿಂತ ಅಧಿಕ ಜನರನ್ನು ನೇಮಿಸಿಕೊಳ್ಳುವ ಸಂಘಟನೆಗಳಲ್ಲಿ ಒಂದು ದೂರು ಪರಿಶೀಲನಾ ಸಮಿತಿಯನ್ನು ರಚಿಸಬೇಕು.

vi. ಪ್ರಧಾನ ಮಂತ್ರಿಗಳ ಅಧ್ಯಕ್ಷತೆಯಲ್ಲಿ ಒಂದು ಉನ್ನತ ಅಧಿಕಾರದ ರಾಷ್ಟ್ರೀಯ ಸಾಮಾಜಿಕ ಭದ್ರತಾ ಪ್ರಾಧಿಕಾರದ ಸೃಷ್ಟಿ ಮತ್ತು

vii. ಉದ್ಯೋಗ ಸೃಷ್ಟಿ ಮತ್ತು ರಕ್ಷಣೆಗಾಗಿ ಅಸಂಘಟಿತ ವಲಯದ ಕಾರ್ಮಿಕರಿಗೆ ಒಂದು ಕಾನೂನನ್ನು ರಚಿಸುವುದು.

ಅದು ಎಲ್ಲಾ ಕಾರ್ಮಿಕ ಕಾನೂನುಗಳನ್ನು ನ್ಯಾಯಯುತವಾಗಿ ಒಗ್ಗೂಡಿಸಿ ಕಾರ್ಮಿಕ ಮಾಲಿಕ ಸಂಬಂಧ ಕಾನೂನು ಅಥವಾ ಕಾರ್ಮಿಕ ಮಾಲಿಕ ಸಂಬಂಧದ ಕಾನೂನು ಎಂಬ ಒಂದೇ ಕಾನೂನನ್ನು ಜಾರಿಗೊಳಿಸಲು ಸಲಹೆ ನೀಡಿದೆ. ಆಡಳಿತದಲ್ಲಿ ಕಾರ್ಮಿಕರ ಪಾಲ್ಗೊಳ್ಳುವಿಕೆಯ ಕುರಿತು ಅದು ಒಂದು ಕಾನೂನು ರೀತಿಯ ಯೋಜನೆ ರೂಪಿಸಲು ಶಿಫಾರಸು ಮಾಡಿದೆ.

ಕನಿಷ್ಠ ಕೂಲಿ ನಿರ್ಧಾರದ ಕುರಿತು ಆಯೋಗವು ಯಾವುದೇ ಉದ್ಯೋಗದಲ್ಲಿ ಕೊಡಲಾಗುವ ಕನಿಷ್ಠ ವೇತನವು ಕಾರ್ಮಿಕ ಮತ್ತು ಅವನ್ ಕುಟುಂಬದ ಅಗತ್ಯಗಳನ್ನು ಪೂರೈಸುವಂತಿರಬೇಕು ಎಂದು ಹೇಳಿದೆ.[2] ಅದು ಕೆಲಸದ ಅವಧಿ, ರಜಾ ಸೌಲಭ್ಯ ಮತ್ತು ಕೆಲಸದ ಸ್ಥಳಗಳಲ್ಲಿನ ಕೆಲಸದ ಸ್ಥಿತಿಗತಿಗಳ ಬಗ್ಗೆ ಒಂದು ಸಾಮಾನ್ಯ ನಿಯಮವನ್ನು ರೂಪಿಸಲು ಕರೆ ನೀಡಿದೆ. ಅದಲ್ಲದೆ ಅಸಂಘಟಿತ ಕಾರ್ಮಿಕರ ಸಂಘ ರಚನೆ ಮತ್ತು ಅದರ ನೊಂದಾವಣೆಗೆ ಅನುಕೂಲವಾಗುವ ರೀತಿಯಲ್ಲಿ ಕಾರ್ಮಿಕ ಸಂಘಟನೆ ಕಾನೂನಿಗೆ ತಿದ್ದುಪಡಿ ತರಬೇಕು ಎಂದಿದೆ. ವೈಯಕ್ತಿಕ ಸಮಸ್ಯೆಗಳು, ದೂರುಗಳು ಮತ್ತು ಕಷ್ಟ ಕಾರ್ಪಣ್ಯಗಳ ಪರಿಗಣನೆಗೆ ಲೋಕ ಅದಾಲತ್, ಕಾರ್ಮಿಕ ನ್ಯಾಯಾಲಯ ಮತ್ತು ಕಾರ್ಮಿಕ ಸಂಬಂಧಗಳ ಆಯೋಗ ಎಂಬ ಮೂರು ಹಂತದ ವ್ಯವಸ್ಥೆಯ ಸೃಷ್ಟಿಗೆ ಆಯೋಗ ಶಿಫಾರಸು ಮಾಡಿದೆ.

## ೩.೨. ಅಸಂಘಟಿತ ವಲಯದ ಸೇವಾ ಭದ್ರತೆಗೆ ಕೈಗೊಳ್ಳುವ ಕಾರ್ಯಕ್ರಮಗಳು

ಅಸಂಘಟಿತ ವಲಯದಲ್ಲಿನ ಕಾರ್ಮಿಕರ ಸಾಮಾಜಿಕ ಭದ್ರತೆ ಮತ್ತು ಕಲ್ಯಾಣ ಕಾರ್ಯಕ್ರಮಗಳನ್ನು ನೋಡಿಕೊಳ್ಳಲು ಎರಡು ವಿಧದ ತಂತ್ರಗಳನ್ನು ಬಳಸಲಾಗುವುದು ಶಾಸನಾತ್ಮಕ ಕ್ರಮಗಳು ಮತ್ತು ಕಲ್ಯಾಣ ಕಾರ್ಯಕ್ರಮಗಳ ಅನುಷ್ಠಾನ ಮತ್ತು ಆ ಕಾರ್ಯಕ್ರಮಗಳ ಅನುಪಾಲನೆ. ಈ ಶಾಸನಾತ್ಮಕ ಕ್ರಮಗಳು ಮತ್ತು ಕಲ್ಯಾಣ ಕಾರ್ಯಗಳು ಇಂತಿವೆ.

೧. ಕಾರ್ಮಿಕರ ಪರಿಹಾರ ಕಾಯಿದೆ,೧೯೨೩

೨. ಕನಿಷ್ಠ ವೇತನ ಕಾಯಿದೆ, ೧೯೪೮

೩. ಮಾತೃತ್ವ ಸೌಲಭ್ಯ ಕಾಯಿದೆ. ೧೯೬೧

೪. ಜೀತ ಕಾರ್ಮಿಕ ಪದ್ಧತಿ (ನಿರ್ಮೂಲನಾ ಕಾಯಿದೆ). ೧೯೭೬

೫. ಗುತ್ತಿಗೆ ಕೆಲಸ (ನಿಯಂತ್ರಣ ಮತ್ತು ರದ್ದತಿ ಕಾಯಿದೆ). ೧೯೭೦

೬. ಅಂತರರಾಜ್ಯ ವಲಸೆ ಕಾರ್ಮಿಕರ (ಉದ್ಯೋಗ ನಿಯಂತ್ರಣ ಮತ್ತು ಸೇವಾ ಪರಿಸ್ಥಿತಿ ಕಾಯಿದೆ),

೧೯೭೯

೭. ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ (ಉದ್ಯೋಗ ನಿಯಂತ್ರಣ ಮತ್ತು ಸೇವಾ ಪರಿಸ್ಥಿತಿ

ಕಾಯಿದೆ),೧೯೯೭

೮. ಆಮ್ ಆದ್ಮಿ ಬಿಮಾ ಯೋಜನೆ (ಎ. ಎ. ಬಿ.ವಯ್.) ಸರಕಾರವು ಇದನ್ನು ೧.೧೦.೨೦೦೩ರಲ್ಲಿ ಅಸ್ತಿತ್ವಕ್ಕೆ ತಂದಿತು. ಈ ವಿಮೆಯು ಅಪಘಾತ ವಿಮೆ ಮತ್ತು ಯಾವುದೇ ರೀತಿಯ ಭೂಮಿ ರಹಿತ ಕೃಷಿಕನಿಗೆ ಕೊಡಲಾಗಿದೆ. ೧.೯೮ ಕೋಟಿ ಜನರು ಈ ಆಮ್ ಆದ್ಮಿ ಬಿಮಾ ಯೋಜನೆಯನ್ನು ೨೯.೨.೨೦೧೨ರ ಒಳಗೆ ಪಡೆದುಕೊಂಡಿರುತ್ತಾರೆ.

೯. ರಾಷ್ಟ್ರೀಯ ಸ್ವಸ್ಥ ಬಿಮಾ ಯೋಜನೆ (ಆರ್. ಎಸ್. ಬಿ. ವಯ್.) ೧.೧೦.೨೦೦೭ ರಂದು ಆರಂಭವಾಯಿತು. ಇಲ್ಲಿ ಅಸಂಘಟಿತ ವಲಯದ ಬಿ.ಪಿ.ಎಲ್. ಕುಟುಂಬಗಳಿಗೆ ಆರೋಗ್ಯ ವಿಮೆಯನ್ನು

ಒದಗಿಸಲಾಗುತ್ತದೆ. ಆರೋಗ್ಯ ವಿಮೆಯ ಮೊತ್ತವು ರೂ. ೩೦,೦೦೦ಗಳಾಗಿರುತ್ತದೆ. ೨೯-೨-೨೦೧೨ರೊಳಗೆ ಸುಮಾರು ೨.೭೯ ಬಿಪಿಎಲ್ ಕುಟುಂಬಗಳು ಇದರ ಪ್ರಯೋಜನ ಪಡೆದುಕೊಂಡಿವೆ.

೧೦. ಇಂದಿರ ಗಾಂಧೀ ನ್ಯಾಷನಲ್ ಓಲ್ಡ್ ಏಜ್ ಸ್ಕೀಮ್ (ಐ.ಜಿ.ಎನ್.ಓ.ಎ.ಪಿ.ಎಸ್.). ವ್ಯಕ್ತಿಯು ಬಡತನ ರೇಖೆಗಿಂತ ಕೆಳಗೆ ಇದ್ದು ಅವರ ಪ್ರಾಯ ೬೦ ಆಗಿದ್ದರೆ ಅವರಿಗೆ ಪ್ರತಿ ತಿಂಗಳು ೨೦೦ ರೂಪಾಯಿ ಮತ್ತು ೮೦ ವರ್ಷದವರಾಗಿದ್ದರೆ ಅವರಿಗೆ ಪ್ರತಿ ತಿಂಗಳು ೫೦೦ ರೂಪಾಯಿ ವೃದ್ಧಾಪ್ಯ ಪಿಂಚಣಿ ನೀಡಲಾಗುತ್ತದೆ. ಇಲ್ಲಿ ೧.೯೦ ಕೋಟಿ ಜನರು ಇದರ ೨೯.೨.೨೦೧೨ ರೊಳಗೆ ಪಡೆದಿರುತ್ತಾರೆ.

೧೧. ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತೆ ಕಾಯಿದೆ (೨೦೦೮) ಜೀವ ಮತ್ತು ವಿಕಲತೆಯಾಗದಂತೆ ರಕ್ಷಣೆ, ಅರೋಗ್ಯ ಮತ್ತು ಮಾತೃತ್ವ ಸೌಲಭ್ಯ, ವೃದ್ಧಾಪ್ಯದಲ್ಲಿ ರಕ್ಷಣೆ ಮತ್ತು ಸರಕಾರವು ನಿರ್ಧರಿಸಬಹುದಾದ ಇತರೆ ಸೌಲಭ್ಯಗಳನ್ನು ಅಸಂಘಟಿತ ವಲಯದ ಕಾರ್ಮಿಕರಿಗೆ ಒದಗಿಸಬಹುದಾಗಿದೆ. ಅದರಂತೆ ಸಚಿವಾಲಯವು ರಾಷ್ಟ್ರೀಯ ಸಾಮಾಜಿಕ ಭದ್ರತಾ ಮಂಡಳಿಯನ್ನು ರಚಿಸಿದೆ.

೧೨. ಕೆಲಸದ ಲೈಂಗಿಕ ಕಿರುಕುಳ (ತಡೆ, ನಿಷೇಧ ಮತ್ತು ನಿವಾರಣಾ) ಕಾಯಿದೆ ಮತ್ತು ನಿಯಮಗಳು, ೨೦೧೩ ಡಬ್ಲ್ಯೂ. ಸಿ. ಡಿ. ಆಫ್ ಮಿನಿಸ್ಟ್ರಿ ಮೂಲಕ ಸೂಚಿಸಲಾಗಿದೆ. ಶಾಸನ ಡಿಸೆಂಬರ್ ೯, ಮಹಿಳೆಯರ ೨೦೧೩ ಜಾರಿಗೋಳಿಸಲಾಯಿತು ಇದು ಮಹಿಳೆಯರ ಮೇಲೆ ನಡೆಯುವ ದೌರ್ಜನ್ಯ ಲೈಂಗಿಕ ಕಿರುಕುಳವನ್ನು ಎದುರಿಸಲು ಜಾರಿಗೊಳಿಸಲಾಯಿತು.

ಹೀಗೆ ಭಾರತದಲ್ಲಿ ಅನೇಕ ಸಾಮಾಜಿಕ ಭದ್ರತಾ ಯೋಜನೆಗಳು ಜಾರಿಗೊಂಡಿವೆ.ಆದರೂ ಸಹ ಈ ಹಿನ್ನೆಲೆಯಲ್ಲಿ ಸಾಮಾಜಿಕ ಭದ್ರತಾ ಕ್ರಮಗಳನ್ನು ಇನ್ನೂ ವ್ಯಾಪಕವಾಗಿ ವಿಸ್ತರಿಸಬೇಕಾಗಿದೆ.

### ೩.೩. ಕಾರ್ಮಿಕ ಸಂಘ ಮತ್ತು ಮಹಿಳೆಯರು

೧೯ ನೇಯ ಶತಮಾನದ ಕೈಗಾರಿಕಾ ಕ್ರಾಂತಿಯ ಪ್ರತಿಫಲ ಕಾರ್ಮಿಕ ಸಂಘ. ಯೂರೋಪಿನ ಕಾರ್ಖಾನೆಗಳಲ್ಲಿ ಮಹಿಳೆಯರು ಮತ್ತು ಮಕ್ಕಳ ಶೋಷಣೆ ಹೆಚ್ಚಾದಾಗ ಅವರ ರಕ್ಷಣೆ ಸಲುವಾಗಿ ಕಾರ್ಮಿಕ ಸಂಘ ಹುಟ್ಟಿಕೊಂಡಿತು. ಕಾರ್ಮಿಕ ಸಂಘದ ಮುಖ್ಯ ಗುರಿ ಕಾರ್ಮಿಕರ ಹಕ್ಕುಗಳನ್ನು ರಕ್ಷಿಸುವುದು, ಕಾರ್ಮಿಕರ ಕಲ್ಯಾಣ ಹಾಗು ಕಾರ್ಮಿಕರನ್ನು ಶೋಷಣೆಯಿಂದ ಮುಕ್ತಗೊಳಿಸುವುದು. ದುಡಿಮೆಗಾರರಿಗೆ ಅನ್ವಯವಾಗುವ ಕಾಯಿದೆ ಕಾನೂನುಗಳು ಜಾರಿಯಲ್ಲಿರುವಂತೆ ನೋಡಿಕೊಳ್ಳುವುದು, ವೇತನ ಕೆಲಸದ ಪರಿಸ್ಥಿತಿ, ಅಪಘಾತ

ಪರಿಹಾರ, ಬೋನಸ್ಸು, ರಜೆ ಮತ್ತು ಇತರ ಸವಲತ್ತುಗಳು ಸರಿಯಾಗಿ ಸಿಗುವಂತೆ ಮಾಡುವುದು ಕಾರ್ಮಿಕ ಸಂಘದ ಕಾರ್ಯ.

ದೊಡ್ಡ ಉದ್ದಿಮೆ, ಕೈಗಾರಿಕೆಗಳಲ್ಲಿ ಮಾಲೀಕರು ಪ್ರತಿಯೊಬ್ಬ ಕಾರ್ಮಿಕನೊಂದಿಗೆ ಮಾತನಾಡಲು, ಅವರ ಸಮಸ್ಯೆಗಳನ್ನು ತಿಳಿದುಕೊಳ್ಳಲು ಸಾಧ್ಯವಿಲ್ಲ. ಕಾರ್ಮಿಕ ಸಂಘವು ತನ್ನ ಪ್ರತಿನಿಧಿಗಳ ಮೂಲಕ ಕಾರ್ಮಿಕ ಸಮಸ್ಯೆ, ಬೇಡಿಕೆಗಳನ್ನು ಮಾಲೀಕರ ಮುಂದಿಡುತ್ತದೆ. ಪ್ರತಿಯೊಬ್ಬ ಕಾರ್ಮಿಕರಿಗೂ ಸಂಘದ ಸದಸ್ಯತ್ವವನ್ನು ಪಡೆಯುವ ಹಕ್ಕಿರುತ್ತದೆ. ಸಂಘಗಳು ಅವರ ಹಕ್ಕನ್ನು ರಕ್ಷಿಸುತ್ತದೆ. ನೈತಿಕ ಬೆಂಬಲ ನೀಡುತ್ತದೆ. ಕಾರ್ಮಿಕರ ವೈಯಕ್ತಿಕ ಬೆಳವಣಿಗೆಗೆ ಅವಕಾಶ ಮಾಡಿ ಕೊಡುತ್ತದೆ.

ಮಹಿಳೆಯರು ಕಾರ್ಮಿಕರಾಗಿ ಸಂಘತನೆಗೊಂಡಿರುವುದು ತುಂಬಾ ಕಡಿಮೆ. ಸಂಘಟನೆಗೊಂಡಿದ್ದರು ಅವರ ಗುರಿ ಹಾಗು ಕಾರ್ಯ ಗಳು ಅಲ್ಪಾವಧಿಯಾಗಿರುತ್ತದೆ. ದುರದೃಷ್ಟಿಯನ್ನು ಹೊಂದಿರುವುದಿಲ್ಲ. ನಿರ್ದಿಷ್ಟ ಘಟನೆ ಸಮಸ್ಯೆ ಉದ್ಭವಿಸಿದಾಗ ಸಂಘತನೆಗೊಂಡ ಮಹಿಳೆಯರು ಅದು ಮುಗಿದ ನಂತರ ಚದುರಿ ಹೋಗುತ್ತಾರೆ. ಹೀಗಾಗಿ ಅವರ ಸಂಘಟನೆ ದೀರ್ಘಕಾಲ ನಡೆಯುವುದಿಲ್ಲ.

ಈಗಾಗಲೇ ಮನೆಗೆಲಸ, ಉತ್ಪಾದಕ ಹಾಗು ಸಂತಾನೋತ್ಪತಿ ಎಂಬ ಮೂರು ಬಗೆಯ ಹೊರೆಗಳನ್ನು ಹೊತ್ತಿರುವ ಮಹಿಳೆಯರು ಕಾರ್ಮಿಕ ಸಂಘದ ಚಟುವಟಿಕೆ, ಜವಾಬ್ದಾರಿ ಹೆಚ್ಚುವರಿ ಕೆಲಸವಾಗಿ ಪರಿಣಮಿಸುತ್ತದೆ. ಕಾರ್ಮಿಕ ಹಿತರಕ್ಷಣೆಗೆ ಕೆಲಸ ಮಾಡುವುದಕ್ಕಿಂತ ಕುಟುಂಬ ಮತ್ತು ಮಕ್ಕಳ ಜವಾಬ್ದಾರಿಗೆ ಆದ್ಯತೆ ನೀಡಬೇಕಾಗುತ್ತದೆ.

**೩.೪. ಮಹಿಳಾ ಸಬಲೀಕರಣ ಮತ್ತು ಅಸಂಘಟಿತ ಮಹಿಳಾ ಕಾರ್ಮಿಕರು**

ಜಗತ್ತಿನ ಜನಸಂಖ್ಯೆಯ ಶೇಕಡಾ ೪೮ರಷ್ಟು ಮಂದಿ ಮಹಿಳೆಯರು. ಭಾರತದಲ್ಲೂ ಮಹಿಳೆಯರು ಶೇಕಡಾ ೪೮ರಷ್ಟು ಇದ್ದಾರೆ. ಹೀಗೆ ಮಹಿಳಾ ವರ್ಗವು ಒಂದು ಪ್ರಮುಖ ಜನವರ್ಗವಾಗಿದೆ. ಆದರೆ ಎಲ್ಲಾ ದೇಶಗಳಲ್ಲೂ ಮಹಿಳೆಯರು ಪುರುಷರಿಗೆ ಸರಿಸಮಾನ ಸ್ಥಾನಮಾನವನ್ನು ಹೊಂದಿಲ್ಲ. ಹೀಗಾಗಿ ಮಹಿಳೆಯರು ಸಾಮಾಜಿಕ- ಆರ್ಥಿಕ-ರಾಜಕೀಯ-ಶಿಕ್ಷಣ-ತಂತ್ರಜ್ಞಾನ,ಉನ್ನತ ಶಿಕ್ಷಣ, ವಿಜ್ಞಾನ ಕ್ಷೇತ್ರಗಳಲ್ಲಿ ಮಹಿಳೆಯರು ಅತ್ಯಂತ ಹಿಂದುಳಿದಿದ್ದಾರೆ. ಆದ್ದರಿಂದ ಮಹಿಳೆಯರಿಗೆ ಸಾರ್ವತ್ರಿಕವಾಗಿ ಸರ್ವಾಂಗೀಣವಾಗಿ ಅಭಿವೃದ್ಧಿ ಮತ್ತು

ಪಾಲ್ಗೊಳ್ಳುವಿಕೆಯ ಅವಕಾಶಗಳನ್ನು ಕಲ್ಪಿಸಬೇಕಾಗಿದೆ. ಈ ಕ್ರಿಯೆಯನ್ನೇ ಮಹಿಳಾ ಸಬಲೀಕರಣ ಎನ್ನಬಹುದು.

ಸಬಲೀಕರಣ ಎಂದರೆ ಶಕ್ತಿ ಸಂಚಯಿಸುವುದೆಂದರ್ಥ, ಅವಲಂಬನೆಯನ್ನು ತೊಡೆದು ಹಾಕಿ ಸ್ವತಂತ್ರವಾದ ಜೀವನ ನಡೆಸಲು ಅಸ್ತಿತ್ವ ಕಂಡುಕೊಳ್ಳುವುದೆಂದು ಅರ್ಥ . ಇದು ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಮಹಿಳಾ ಸಬಲೀಕರಣದ ಅಗತ್ಯವನ್ನು ಸ್ಪಷ್ಟಪಡಿಸುತ್ತದೆ.

ಮತದಾನದ ಹಕ್ಕು ವ್ಯಕ್ತಿ ರಾಜಕೀಯವಾಗಿ ಪಾಲ್ಗೊಳ್ಳುವ,ಅಧಿಕಾರ ನಡೆಸುವಿಕೆಯನ್ನು ಪ್ರತಿನಿಧಿಸುತ್ತದೆ. ಆಸ್ತಿ ಹಕ್ಕು, ಆಸ್ತಿ ಹೊಂದುವಿಕೆ, ಕೂಲಿ , ಉದ್ಯೋಗಗಳಿಸುವುದು. ಉದ್ಯಮ ಸಂಘಟನಕಾರರಾಗುವುದು, ಎಲ್ಲವೂ ಸಂಬಂಧಿಸಿದ ವ್ಯಕ್ತಿಯ ಆರ್ಥಿಕ ಸಬಲೀಕರಣಕ್ಕೆ ಕಾರಣವಾಗುವುದು. ಇದೆ ರೀತಿ ಸಾಮಾಜಿಕ-ಸಾಂಸ್ಕೃತಿಕ ಕ್ರಿಯೆಗಳಲ್ಲಿ ಪಾಲ್ಗೊಳ್ಳುವುದು ಕೂಡಾ ಸಬಲೀಕರಣಕ್ಕೆ ಅವಕಾಶಗಳನ್ನು ತೆರೆಯುವುದು. ಈ ಎಲ್ಲಾ ಬಗೆಯ ಅವಕಾಶಗಳನ್ನು ಮಹಿಳೆ ಪಡೆಯುವುದು ನ್ಯಾಯೋಚಿತವಾಗಿದೆ. ಆದ್ದರಿಂದ ಮಹಿಳಾ ಸಬಲೀಕರಣಕ್ಕೆ ಅಪಾರವಾದ ಸಾಮಾಜಿಕ ಮಹತ್ವವಿದೆ.

ಸಬಲೀಕರಣವೆಂದರೆ ಬಡವರ, ದೀನದಲಿತರ ಪರಾವಲಂಬಿಗಳ ಶಕ್ತಿ ಸಂವರ್ಧನೆ ಎಂದರ್ಥ. ಮಹಿಳೆಯರೂ ಶೋಷಿತರು. ಹೀಗಾಗಿ ಮಹಿಳಾ ಸಬಲೀಕರಣದ ಕುರಿತು ಜಗತ್ತಿನಾದ್ಯಂತ ಇಂದು ಚರ್ಚೆ ನಡೆಯುತ್ತಿದೆ. ಮಹಿಳೆ ಸಾರ್ವತ್ರಿಕವಾಗಿ ಸಾಮಾಜಿಕ ಆರ್ಥಿಕ-ರಾಜಕೀಯ ಕ್ರಿಯೆಗಳಲ್ಲಿ ಪಾಲ್ಗೊಳ್ಳುವಂಥ ಪರಿಸರ ನಿರ್ಮಾಣವಾಗಬೇಕಾಗಿದೆ.ಈ ದಿಶೆಯಲ್ಲಿ ವಿಶ್ವಸಂಸ್ಥೆಯು ನಡೆಸಿದ ಪ್ರಯತ್ನಗಳ ಫಲವಾಗಿ ಎಲ್ಲಾ ದೇಶಗಳಲ್ಲೂ ಮಹಿಳಾ ಸಬಲೀಕರಣದ ಕುರಿತು ಅರಿವು ಮತ್ತು ಬದ್ಧತೆ ಮೂಡುತ್ತಿದೆ.

ಮಹಿಳಾ ಸಬಲೀಕರನವು ಕೆಳಕಂಡ ಆಯಾಮಗಳನ್ನು ಒಳಗೊಳ್ಳುವುದು.

೧. ಮಹಿಳಾ ಸ್ವಾತಂತ್ರ್ಯ ಮತ್ತು ಸಾಮಾನತೆ

೨. ಮಹಿಳೆಗೆ ಆರ್ಥಿಕ-ಸಾಮಾಜಿಕ-ರಾಜಕೀಯ ಅವಕಾಶಗಳ ಸೃಷ್ಟಿ

೩. ಶಿಕ್ಷಣ ಮತ್ತು ಅರೋಗ್ಯ ಸುರಕ್ಷೆಗಳಿಗೆ ಮಹಿಳೆಯ ಪ್ರವೇಶ

೩. ಮಹಿಳಾ ಸಬಲೀಕರಣಕ್ಕಾಗಿ ಅವಶ್ಯಕವಾದ ಕಾನೂನು ಮತ್ತು ಶಾಸನಾತ್ಮಕ ಚೌಕಟ್ಟನ್ನು ನಿರ್ಮಿಸುವುದು. ಇದರೊಳಗೆ ಮಹಿಳಾ ಶೋಷಣೆ, ಮಹಿಳಾ ತಾರತಮ್ಯಗಳನ್ನು ಮತ್ತು ನಿರಾಕರಣೆಗಳನ್ನು ಅಪರಾಧವೆಂದು ಮತ್ತು ಮಾನವ ಹಕ್ಕುಗಳ ಉಲ್ಲಂಘನೆಯೆಂದು ಪರಿಗಣಿಸಿ ದಂಡ ಮತ್ತು ಶಿಕ್ಷೆ ವಿಧಿಸುವುದು.

ಮೇಲೆ ತಿಳಿಸಿದಂಥ ವಿಷಯಗಳು ಅಸಂಘಟಿತ ವಲಯದ ಮಹಿಳೆಯರಿಗೆ ಅಗತ್ಯವೆಂದು ಕಾಣಿಸುತ್ತವೆ. ಮಹಿಳಾ ಸಬಲೀಕರಣದಿಂದ ಅಸಂಘಟಿತ ಮಹಿಳೆಯರ ಸ್ಥಾನಮಾನವನ್ನು ಹೆಚ್ಚಿಸಬಹುದು ಮತ್ತು ವಂಚಿತರಾಗುವುದರಿಂದ ದೂರ ಮಾಡಬಹುದು. ಮಹಿಳಾ ಸಬಲೀಕರಣವು ಅವಿದ್ಯಾವಂತ, ಅಶಿಕ್ಷಿತ ಸಾಮಾಜಿಕ-ರಾಜಕೀಯ ಮತ್ತು ಆರ್ಥಿಕ ವಲಯಗಳಲ್ಲಿ ಪಾಲ್ಗೊಳ್ಳಲು ಅನುಕೂಲವಾಗುತ್ತದೆ ಮತ್ತು ಲಿಂಗ ತಾರತಮ್ಯವನ್ನು ದೂರ ಮಾಡಬಹುದು.

ಕೊನೆಯದಾಗಿ, ಮಹಿಳೆಯರ ಅಧಿಕಾರದ ರಂಗಪ್ರವೇಶವೆನ್ನುವುದು ಕೇವಲ ನಾಮ ಮಾತ್ರವಾಗಿ ಪುರುಷರು ರಿಮೋಟ್ ಆಗಿ ಕೆಲಸ ಮಾಡಿದ ಉದಾಹರಣೆಗಳು ಧಾರಳವಿದೆ. ಇದರಿಂದ ಮಹಿಳೆ ಸಬಲಳಾಗಲು ಖಂಡಿತ ಸಾಧ್ಯವಿಲ್ಲ ಆದುದರಿಂದ ತನ್ನ ಸಾಮರ್ಥ್ಯ ಬುದ್ಧಿವಂತಿಕೆಯನ್ನು ಬೆಳೆಸಲು ಮತ್ತು ತನ್ನ ಗೌರವ ವ್ಯಕ್ತಿತ್ವವನ್ನು ಉತ್ತಮಗೊಳಿಸಿದರೆ ಮಾತ್ರ ಮಹಿಳಾ ಮೀಸಲಾತಿಯ ಉದ್ದೇಶ ಈಡೇರಬಹುದೇನೋ? ಮುಂದಿನ ಅಧ್ಯಯನದಲ್ಲಿ ನಮ್ಮ ಅಧ್ಯಯನದ ವಿಷಯವನ್ನು ವಿಶ್ಲೇಷಣೆಯ ಮುಖಾಂತರ ತಿಳಿಯೋಣ.

## ೩.೫. ಕೊನೆ ಟಿಪ್ಪಣಿ

೧. ಅನ್ನಪೂರ್ಣೇಶ್ವರಿ ಎನ್."ಭಾರತದ ಅರ್ಥಿಕಾಭಿವೃದ್ಧಿ" ಅರ್ಜುನ್ ಪಬ್ಲಿಷಿಂಗ್ ಹೌಸ್ ,ಮೈಸೂರು. ಪುಟ ಸಂಖ್ಯೆ ೫೩.

೨. ಹೇಮಲತಾ ಎಚ್ ಎಂ: ಅರ್ಥ, ಹುಟ್ಟು, ಬೆಳವಣಿಗೆ, ಪರಿಕಲ್ಪನೆ, ಸಿದ್ಧಾಂತಗಳು, ಮಹಿಳಾ ಅಧ್ಯಯನ ೧, ಮೈಸೂರ್, ೨೦೦೪. ಪುಟ ಸಂಖ್ಯೆ ೪೪.

# ಅಧ್ಯಾಯ ೪

## ಮಂಗಳೂರು ತಾಲೂಕಿನ ಮಾಲ್ ಗಳಲ್ಲಿ ದುಡಿಯುವ ಮಹಿಳೆಯರ ಸಮಸ್ಯೆಗಳು -ಕ್ಷೇತ್ರಾಧಾರಿತ ಮಾಹಿತಿ ವಿಶ್ಲೇಷಣೆ

೪.೧. ಪ್ರಶ್ನಾವಳಿಗೆ ಉತ್ತರಿಸಿದವರಿಗೆ ಸಂಬಂಧಿಸಿದಂತೆ ಸಾಮಾನ್ಯ ಮಾಹಿತಿಗಳು ಮತ್ತು ಅದರ ವಿಶ್ಲೇಷಣೆಗಳು

೪.೨. ಇತರ ವಿವರಗಳು

೪.೩. ದುಡಿಯುವ ಅಭಿಪ್ರಾಯಗಳು

೪.೪.ಸಮಸ್ಯೆಗಳನ್ನು ಸರಿಪಡಿಸುವ ಮಾರ್ಗೋಪಾಯಗಳು

## ಮಂಗಳೂರು ತಾಲೂಕಿನ ಮಾಲ್ ಗಳಲ್ಲಿ ದುಡಿಯುವ ಮಹಿಳೆಯರ ಸಮಸ್ಯೆಗಳು -ಕ್ಷೇತ್ರಾಧಾರಿತ ಮಾಹಿತಿ ವಿಶ್ಲೇಷಣೆ

ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳೆಯರಿಗಾಗಿ ಈಗಾಗಲೇ ಕೈಗೊಂಡಿರುವ ಕ್ರಮಗಳಬಗ್ಗೆ ತಿಳಿದರೆ ಸಾಲದು ಆ ಕ್ರಮಗಳ ಬಗ್ಗೆ ಅಲ್ಲಿ ದುಡಿಯುವ ಮಹಿಳಾ ಕಾರ್ಮಿಕರ ಅಭಿಪ್ರಾಯಗಳನ್ನು ತಿಳಿಯಲು ಅವರಿಂದಲೇ ವಿಷಯಗಳನ್ನು ಪ್ರಶ್ನಾವಳಿಯ ಮೂಲಕ ಮಾಡಿರುವುದರ ವಿವರಣೆಯನ್ನು ಈ ಅಧ್ಯಯನದಲ್ಲಿ ವಿವರಿಸಲಾಗಿದೆ. ಆಧುನಿಕ ಪ್ರಪಂಚದಲ್ಲಿ ಎಲ್ಲಾ ವಲಯಗಳು ಅಭಿವೃದ್ಧಿ ಪಥದಲ್ಲಿ ಸಾಗುತ್ತಿರುವುದನ್ನು ನಾವು ನೋಡುತ್ತಿದ್ದೇನೆ ಆದರೆ ಅವರಲ್ಲಿ ಮಾಲ್ ಗಳಲ್ಲಿ ಮಾತ್ರ ಹಿಂದುಳಿದಿವೆ. ಪ್ರತಿಯೊಬ್ಬ ಮನುಷ್ಯ ತಮ್ಮ ಹೊಟ್ಟೆ ಪಾಡಿಗಾಗಿ ಹಲವು ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾನೆ ಅದರಲ್ಲಿ ಮಾಲ್ ಒಂದು. ಅಸಂಘಟಿತ ವಲಯದಲ್ಲಿ ಮಾಲ್ ಅನ್ವಯವಾಗುತ್ತದೆ. ಇಲ್ಲಿ ಯಾವುದೇ ರೀತಿಯ ಸಂಘಟಿತ ಸೌಕರ್ಯಗಳು ಲಭ್ಯವಿಲ್ಲ ಇಲ್ಲಿ ದುಡಿಯುವವರು ಹೆಚ್ಚಾಗಿ ಬಡವರಾಗಿರುತ್ತಾರೆ.

ದೇಶದ ಅಭಿವೃದ್ಧಿಯಲ್ಲಿ ಅಸಂಘಟಿತ ವಲಯದ ಪಾತ್ರ ಬಹು ಮುಖ್ಯಾವಾದುದ್ದು, ಅಸಂಘಟಿತ ವಲಯಗಳಲ್ಲಿ ಒಂದಾದ ಮಾಲ್ ಗಳಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳ ಬಗ್ಗೆ ತಿಳಿಯಬೇಕೆಂದು ಒಂದು ಕುತೂಹಲವಾಗಿರುವುದರಿಂದ ಈ ಮೂಲಕ ಇದರ ಸಂಶೋಧನೆಯನ್ನು ಮಾಡಲಾಗಿದೆ.

ಮಂಗಳೂರು ತಾಲೂಕಿನಲ್ಲಿ ಮಾಲ್ ಗಳ ಸಂಖ್ಯೆಯು ದಿನದಿಂದ ದಿನಕ್ಕೆ ಹೆಚ್ಚುತ್ತಾ ಹೋಗುತ್ತಿದೆ ಮತ್ತು ಜಿಲ್ಲೆಯ ಆರ್ಥಿಕ ಬೆಳವಣಿಗೆಯಲ್ಲಿ ಬಹಳ ಉಪಯುಕ್ತವಾಗಿದೆ. ಇದು ಜನರಿಗೆ ಉದ್ಯೋಗ ಮತ್ತು ಆದಾಯ ಪಡೆಯುವಂತೆ ಅವಕಾಶಗಳನ್ನು ಮಾಡಿಕೊಡುತ್ತಿದೆ. ಪೇಟೆ ಮಾತ್ರವಲ್ಲದೆ ಜಿಲ್ಲೆಯಲ್ಲಿ ಕೂಡ ಒಂದು ವೇಗವಾಗಿ ಬೆಳೆಯುತ್ತಿರುವ ಅಸಂಘಟಿತ ವಲಯವಾಗಿದೆ. ಇದಲ್ಲದೇ ಅದರಲ್ಲಿ ದುಡಿಯುತ್ತಿರುವ ಮಹಿಳಾ ಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿ ದುಡಿಯುತ್ತಿದ್ದು ಅವರ ಸ್ಥಿತಿಗತಿಗಳನ್ನು ನಾವು ಈ ಮೂಲಕ ತಿಳಿಯೋಣ.

ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಮಂಗಳೂರು ತಾಲ್ಲೂಕಿನಲ್ಲಿ ಒಂದು ಅಧ್ಯಯನ ಎಂಬ ಈ ಅಧ್ಯಯನವು ಅಸಂಘಟಿತ ವಲಯದ ಬಟ್ಟೆ ಅಂಗಡಿಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರ ಸಮಸ್ಯೆಗಳನ್ನು ಅಧ್ಯಯನ ಮಾಡುವುದನ್ನು ಉದ್ದೇಶವಾಗಿಟ್ಟುಕೊಂಡು ನಡೆಸಲಾಗಿದೆ. ಈ

ಸಮೀಕ್ಷೆಯು ಮಹಿಳಾ ಕಾರ್ಮಿಕರ ವೃತ್ತಿ, ಪ್ರವೃತ್ತಿ, ತೃಪ್ತಿಯ ಕುರಿತಾಗಿ ಮಾತ್ರವಲ್ಲದೆ ಅವರ ಭಾಗವಹಿಸುವಿಕೆಯ ಕುರಿತು ಕೇಂದ್ರಿಕೃತಗೊಂಡಿದೆ.

ಮಂಗಳೂರು ತಾಲೂಕಿನ ಬಟ್ಟೆ ಅಂಗಡಿಗಳು ಮತ್ತು ಮಾಲ್ ಗಳಲ್ಲಿ ಪ್ರಶ್ನಾವಳಿ ವಿಧಾನದ ಮೂಲಕ ಪ್ರಾಥಮಿಕ ಮಾಹಿತಿಯನ್ನು ಮಹಿಳಾ ಕಾರ್ಮಿಕರಿಂದ ಸಂಗ್ರಹಿಸಲಾಯಿತು.

ಮಾಲ್ ಗಳಲ್ಲಿ ದುಡಿಯುವ ಮಹಿಳ ಕಾರ್ಮಿಕರ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಸಂಗ್ರಹಿಸಲಾದ ಮಾಹಿತಿಯನ್ನು ಈ ಕೆಳಗಿನ ಶೀರ್ಷಿಕೆಗಳಡಿಯಲ್ಲಿ ಕೋಷ್ಟಕಗಳ ಮೂಲಕ ಅಭಿವ್ಯಕ್ತಗೋಳಿಸಲಾಗಿದೆ.

೧. ವೈಯಕ್ತಿಕ ಮಾಹಿತಿ

೨. ಸಾಮಾಜಿಕ ಮಾಹಿತಿ

೩. ಉದ್ಯೋಗ ಮಾಹಿತಿ

ವೈಯಕ್ತಿಕ ಮಾಹಿತಿಯಲ್ಲಿ ಮಹಿಳಾ ಕಾರ್ಮಿಕರ ಹೆಸರು ವಿಳಾಸ ಮನೆಯ ಬಗ್ಗೆ ವಿಷಯಗಳನ್ನು ಸಂಗ್ರಹಿಸಿದರೆ. ಸಾಮಾಜಿಕ ಮಾಹಿತಿಯಲ್ಲಿ ಅವರ ಶಿಕ್ಷಣ ಧರ್ಮ ಜಾತಿ ಗಳ ಬಗ್ಗೆ ತಿಳಿದುಕೊಂಡು ಮೂರನೇ ಉದ್ಯೋಗ ಮಾಹಿತಿಯಲ್ಲಿ ಉದ್ಯೋಗದ ಸ್ಥಿತಿಗತಿ ಮತ್ತು ಸಮಸ್ಯೆಗಳ ಬಗ್ಗೆ ವಿವರಣೆ ಯನ್ನು ಪಡೆಯಲಾಗಿದೆ.

### ೪.೧. ಪ್ರಶ್ನಾವಳಿಗೆ ಉತ್ತರಿಸಿದವರಿಗೆ ಸಂಬಂಧಿಸಿದಂಥ ಸಾಮಾನ್ಯ ಮಾಹಿತಿಗಳು

ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ ಮಾಹಿತಿ ಸಂಗ್ರಹಣೆಯ ಸಂದರ್ಭದಲ್ಲಿ ಉತ್ತರಿಸಿದವರ ಕೌಟುಂಬಿಕ ಹಿನ್ನೆಲೆಯ ಪರಿಚಯ ಮಾಡಿಕೊಳ್ಳುವ ಪರಿಪಾಠವಿದೆ. ಅದರಂತೆ ಪ್ರಸ್ತುತ ಅಧ್ಯಯನದಲ್ಲಿಯೂ ಪ್ರಶ್ನಾವಳಿಯ ಆರಂಭದಲ್ಲಿ ಮಾಹಿತಿದಾರರ ಹೆಸರು, ವಿಳಾಸ ಉದ್ಯೋಗ, ಹಾಗು ವಿದ್ಯಾರ್ಹತೆಗಳಿಗೆ ಸಂಬಂಧಿಸಿದಂತೆ ಸಾಮಾನ್ಯ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಮಾತ್ರವಲ್ಲದೆ ಅವರ ಉದ್ಯೋಗದ ಬಗ್ಗೆ ಭಾಗವಹಿಸುವಿಕೆ ಇತ್ಯಾದಿ ವಿಷಯಗಳ ಬಗ್ಗೆ ಮಾಹಿತಿ ಸಂಗ್ರಹಿಸಲಾಗಿದೆ. ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಪ್ರಶ್ನಾವಳಿಯನ್ನು ಮಂಗಳೂರು ತಾಲೂಕಿನ ಆಯ್ದ ೧೦೦ ಮಹಿಳೆಯರಿಗೆ ಹಂಚಲಾಯಿತು. ಅವರಲ್ಲಿ ೭೦ ಮಹಿಳೆಯರು ಮಾತ್ರ ಉತ್ತರಿಸಿದ್ದಾರೆ.

ಬದಲಾವಣೆ ಪ್ರಮುಖ ಅಸ್ತ್ರ ಶಿಕ್ಷಣ. ಶಿಕ್ಷಣವು ಹೆಣ್ಣು ಮಕ್ಕಳನ್ನು ಸಬಲೀಕರಣದ ಹಾದಿಗೆಕೊಂಡೊಯ್ಯಬಲ್ಲದು ಈ ಮಾಲ್ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರ ವಿದ್ಯಾರ್ಹತೆಯನ್ನು ಈ ಕೆಳಗಿನ ಕೋಷ್ಟಕದಲ್ಲಿ ಅಭಿವ್ಯಕ್ತಗೊಳಿಸಲಾಗಿದೆ.

**ಕೋಷ್ಟಕ ೪.೧. ಮಾಹಿತಿದಾರರ ವಿದ್ಯಾರ್ಹತೆ**

| ಕ್ರಮ ಸಂಖ್ಯೆ | ವಿಧ್ಯಾರ್ಹತೆ | ಸಂಖ್ಯೆ | ಶೇಕಡವಾರು ಪ್ರಮಾಣ |
|---|---|---|---|
| ೧ | ಪ್ರಾಥಮಿಕ ಶಿಕ್ಷಣ | ೭ | ೧೦ |
| ೨ | ಪ್ರೌಢ ಶಿಕ್ಷಣ | ೧೮ | ೨೬ |
| ೩ | ಪದವಿಪೂರ್ವ ಶಿಕ್ಷಣ | ೨೪ | ೩೪ |
| ೪ | ಪದವಿ ಶಿಕ್ಷಣ | ೨೧ | ೩೦ |
| | ಒಟ್ಟು | ೭೦ | ೧೦೦ |




ಈ ಮೇಲ್ಕಂಡ ಅಂಕಿಅಂಶಗಳ ಪ್ರಕಾರ ಶೇಕಡಾ ೧೦ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಪ್ರಾಥಮಿಕ ಶಿಕ್ಷಣವನ್ನು, ಶೇಕಡಾ ೨೬ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ

ಕಾರ್ಮಿಕರು ಪ್ರೌಢ ಶಿಕ್ಷಣವನ್ನು, ಶೇಕಡಾ ೩೪ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಪದವಿಪೂರ್ವ ಶಿಕ್ಷಣವನ್ನು,ಮತ್ತು ಶೇಕಡಾ ೩೦ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಪದವಿ ಶಿಕ್ಷಣವನ್ನು ಪಡೆದಿದ್ದಾರೆ. ಇದರಿಂದ ತಿಳಿಯುದೇನೆಂದರೆ ಮಾಲ್ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಅಕ್ಷರಸ್ಥರಾಗಿದ್ದರು ತಮ್ಮ ವಿಧ್ಯಾಭ್ಯಾಸಕ್ಕೆ ತಕ್ಕ ಕೆಲಸ ಸಿಗದೇ ಈ ಉದ್ಯೋಗವನ್ನು ಆರಿಸಿ ಕೊಂಡಿರುವುದನ್ನು ಕಾಣಬಹುದು.

ಪ್ರತಿಯೊಬ್ಬ ಮನುಷ್ಯನ ಕೆಲಸದ ತೃಪ್ತಿಯನ್ನು ಅವರು ಎಷ್ಟು ವರ್ಷಗಳ ಕಾಲ ಆ ಕೆಲಸದಲ್ಲಿ ಮುಂದುವರಿಯುತ್ತಾರೆ ಎನ್ನುದರ ಮೂಲಕ ತಿಳಿಯಬಹುದು ಈ ಕೆಳಗಿನ ಕೋಷ್ಟಕದಲ್ಲಿ ಮಾಲ್ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಆ ವಲಯದಲ್ಲಿ ಎಷ್ಟು ವರ್ಷಗಳ ಕಾಲ ದುಡಿಯುತ್ತಿದ್ದಾರೆ ಎಂದು ತಿಳಿಸಲಾಗಿದೆ.

**ಕೋಷ್ಟಕ ೪.೨. ಮಾಹಿತಿದಾರರು ಮಾಲ್ ಗಳಲ್ಲಿ ದುಡಿಯಲು ಪ್ರಾರಂಭಿಸಿದ ಅವಧಿ**

| ಕ್ರಮ ಸಂಖ್ಯೆ | ಮಾಲ್ ಗಳಲ್ಲಿ ದುಡಿಯಲು ಪ್ರಾರಂಭಿಸಿದ ಅವಧಿ | ಸಂಖ್ಯೆ | ಶೇಕಡವಾರು ಪ್ರಮಾಣ |
|---|---|---|---|
| ೧ | ೧ ಕ್ಕಿಂತ ಕಡಿಮೆ ವರ್ಷ | ೭ | ೧೦ |
| ೨ | ೧-೩ ವರ್ಷ | ೩೯ | ೫೬ |
| ೩ | ೩-೫ ವರ್ಷ | ೧೪ | ೨೦ |
| ೪ | ೫ ಕ್ಕಿಂತ ಹೆಚ್ಚು ವರ್ಷ | ೧೦ | ೧೪ |
| | ಒಟ್ಟು | ೭೦ | ೧೦೦ |




ಈ ಮೇಲ್ಕಂಡ ಅಂಕಿಅಂಶಗಳ ಪ್ರಕಾರ ಶೇಕಡಾ ೧೦ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಮಾಲ್ ಗಳಲ್ಲಿ ಕೆಲಸ ಮಾಡಲು ಪ್ರಾರಂಭ ಮಾಡಿ ಒಂದಕ್ಕಿಂತ ಕಡಿಮೆ ವರ್ಷವಾಗಿದೆ., ಶೇಕಡಾ ೫೬ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಮಾಲ್ ಗಳಲ್ಲಿ ದುಡಿಯಲು ಪ್ರಾರಂಭಿಸಿ ಒಂದರಿಂದ ಮೂರು ವರ್ಷಗಳಾಗಿವೆ , ಶೇಕಡಾ ೨೦ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಮಾಲ್ ಗಳಲ್ಲಿ ದುಡಿಯಲು ಪ್ರಾರಂಭಿಸಿ ಮೂರರಿಂದ ಐದು ವರ್ಷಗಳಾಗಿವೆ, ಶೇಕಡಾ ೧೪ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ೫ ಕ್ಕಿಂತ ಹೆಚ್ಚು ವರ್ಷಗಳ ಕಾಲ ಮಾಲ್ ಗಳಲ್ಲಿ ದುಡಿಯುತ್ತಿದ್ದಾರೆ. ಇದರಿಂದ ತಿಳಿಯುದೇನೆಂದರೆ.ಮಾಲ್ಗಳಲಿ ದುಡಿಯುವ ಮಹಿಳಾ ಕಾರ್ಮಿಕರು ಬೇರೆ ಕೆಲಸ ಸಿಗದೇ ಇರುವ ಕಾರಣದಿಂದ ಈ ವಲಯವನ್ನು ಆಯ್ಕೆ ಮಾಡಿಕೊಂಡಿರುತ್ತಾರೆ ಅವರ ಸ್ವ ಇಚ್ಛೆಯಿಂದ ಅಲ್ಲ ಹಾಗಾಗಿ ಅವರು ಒಂದರಿಂದ ಮೂರು ವರ್ಷಗಳ ಕಾಲ ದುಡಿದು ಬೇರೆ ಕೆಲಸಗಳಿಗೆ ಸೇರುತ್ತಾರೆ.

ಮನುಷ್ಯನು ತನ್ನ ಅವಶ್ಯಕತೆಗಳನ್ನು ಪೂರೈಸಲು ಯಾವುದೇ ಕೆಲಸ ಮಾಡಬಹುದು ಆದರೆ ಅವನು ಅದೇ ಕೆಲಸದಲ್ಲಿ ಮುಂದುವರಿಯಲು ಬಯಸುತ್ತರೆಯೇ ಎಂಬ ವಿಷಯದ ಮೇಲೆ ಅವರ ಕೆಲಸ ಬಗ್ಗೆ ಅವರಿಗಿರುವ ಅಭಿಪ್ರಾಯವನ್ನು ತಿಳಿಯಬಹುದಾಗಿದೆ. ಇದರ ಮಾಹಿತಿಯನ್ನು ಈ ಕೆಳಕಂಡ ಕೋಷ್ಟಕದಲ್ಲಿ ನೀಡಲಾಗಿದೆ.

ೋಷ್ಟಕ ೪.೩. ಮಾಹಿತಿದಾರರು ಮಾಲ್ ಗಳಲ್ಲಿ ಇಷ್ಟ ಪಡುವ ಬಗ್ಗೆ

| ..ಮ ..ಂಖ್ಯೆ | ಮಾಲ್ ಗಳಲ್ಲಿ ದುಡಿಯಲು ಇಷ್ಟ ಪಡುವ | ಸಂಖ್ಯೆ | ಶೇಕಡವಾರು ಪ್ರಮಾಣ |
|---|---|---|---|
| ) | ಹೌದು | ೨೧ | ೩೦ |
| ) | ಇಲ್ಲ | ೪೯ | ೭೦ |
| | ಒಟ್ಟು | ೭೦ | ೧೦೦ |




ಈ ಮೇಲ್ಕಂಡ ಅಂಕಿಅಂಶಗಳ ಪ್ರಕಾರ ಶೇಕಡಾ ೩೦ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಈ ವಲಯದಲ್ಲಿ ಕೆಲಸ ಮಾಡಲು ಇಷ್ಟ ಪಟ್ಟರೆ, ಶೇಕಡಾ ೭೦ ರಷ್ಟು ಮಾಲ್ ಗಳಲ್ಲಿ

ಡಿಯುವ ಮಹಿಳಾ ಕಾರ್ಮಿಕರು ಈ ವಲಯದಲ್ಲಿ ಕೆಲಸ ಮಾಡಲು ಇಷ್ಟ ಪಡುವುದಿಲ್ಲ ಹಲವಾರು ತ್ತಡಗಳಿಂದ ಅವರು ಈ ವಲಯದಲ್ಲಿ ದುಡಿಯುತ್ತಿದ್ದಾರೆ ಎನ್ನುದಕ್ಕೆ ಇದು ಒಂದು ನಿದರ್ಶನವಾಗಿದೆ.

ಮಾನವರು ತಮ್ಮ ಒತ್ತಡಗಳಿಗೆ ಅನುಗುಣವಾಗಿ ಒಂದೊಂದು ವಲಯದಲ್ಲಿ ದುಡಿಯುತ್ತಾರೆ. ಆದರೆ ವರಿಗೆ ಆ ಕೆಲಸದ ಭದ್ರತೆ ಇದ್ದಾಗ ಮಾತ್ರ ಅವರು ನೆಮ್ಮದಿಯಿಂದ ದುಡಿಯಲು ಸಾಧ್ಯ ಅದರ ವಿವರಗಳನ್ನು ಕೆಳಗಿನ ಕೋಷ್ಟಕದಲ್ಲಿ ಕೊಡಲಾಗಿದೆ.

**ಕೋಷ್ಟಕ ೪.೪. ಮಾಹಿತಿದಾರರ ಕೆಲಸದ ಭದ್ರತೆ**

| ಕ್ರಮ ಸಂಖ್ಯೆ | ಕೆಲಸದ ಭದ್ರತೆ | ಸಂಖ್ಯೆ | ಶೇಕಡವಾರು ಪ್ರಮಾಣ |
|---|---|---|---|
| ೧ | ಹೌದು | ೪೨ | ೬೦ |
| ೨ | ಇಲ್ಲ | ೧೮ | ೪೦ |
| | ಒಟ್ಟು | ೬೦ | ೧೦೦ |



ಈ ಮೇಲ್ಕಂಡ ಅಂಕಿಅಂಶಗಳ ಪ್ರಕಾರ ಶೇಕಡಾ ೬೦ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಈ ವಲಯದಲ್ಲಿ ಕೆಲಸದ ಭದ್ರತೆ ಇದೆ ಎಂದರೆ , ಶೇಕಡಾ ೪೦ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಕೆಲಸದ ಭದ್ರತೆ ಇಲ್ಲ ಎಂದಿದ್ದಾರೆ. ಅಭಿವೃದ್ಧಿ ಹೊಂದುತ್ತಿರುವ ಮಂಗಳೂರಿನಲ್ಲಿ ಹಲವಾರು ಮಾಲ್ ಗಳು ಪ್ರಾರಂಭವಾಗಿದ್ದು ಮಹಿಳಾ ಕಾರ್ಮಿಕರಿಗೆ ಬೇಡಿಕೆ ಇದೆ ಆದರೆ ಅದು ಕೆಲಸದ ಭದ್ರತೆ ಎಂದು ಅನಿಸಿಕೊಳ್ಳುವುದಿಲ್ಲ.

ಆರೋಗ್ಯವಂತ ಮನುಷ್ಯ ಎಂತಹ ಕಷ್ಟ ಬಂದರು ಎದುರಿಸಲು ಸಾಧ್ಯ ಆದ್ದರಿಂದ ನಾವು ದುಡಿಯುವಲ್ಲಿ ನಮಗೆ ಆರೋಗ್ಯ ರಕ್ಷಣೆ ಬಹು ಮುಖ್ಯ ಅವುಗಳ ಬಗ್ಗೆ ವಿವರಣೆ ಈ ಕೆಳಗಿನ ಕೋಷ್ಟಕದಲ್ಲಿ ಕೊಡಲಾಗಿದೆ.

**ಕೋಷ್ಟಕ ೪.೫. ಮಾಹಿತಿದಾರರ ಆರೋಗ್ಯ ರಕ್ಷಣೆ**

| ಕ್ರಮ ಸಂಖ್ಯೆ | ಆರೋಗ್ಯ ರಕ್ಷಣೆ | ಸಂಖ್ಯೆ | ಶೇಕಡವಾರು ಪ್ರಮಾಣ |
|---|---|---|---|
| ೧ | ಹೌದು | ೪೯ | ೮೦ |
| ೨ | ಇಲ್ಲ | ೨೧ | ೩೦ |
| | ಒಟ್ಟು | ೮೦ | ೧೦೦ |




ಈ ಮೇಲ್ಕಂಡ ಅಂಕಿಅಂಶಗಳ ಪ್ರಕಾರ ಶೇಕಡಾ ೭೦ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಈ ವಲಯದಲ್ಲಿ ಆರೋಗ್ಯ ರಕ್ಷಣೆ ಇದೆ ಎಂದರೆ , ಶೇಕಡಾ ೩೦ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಅರೋಗ್ಯ ರಕ್ಷಣೆ ಇಲ್ಲ ಎಂದಿದ್ದಾರೆ. ಅಭಿವೃದ್ಧಿ ಹೊಂದುತ್ತಿರುವ ಮಂಗಳೂರಿನಲ್ಲಿ ಹಲವಾರು ಮಾಲ್ ಗಳು ಸ್ವಚ್ಛ ವಾಗಿದ್ದರೂ ಅವುಗಳಲ್ಲಿ ಕೆಲಸ ಮಾಡುವವರು ದಿನವಿಡೀ ನಿಂತುಕೊಂಡು ಬಗ್ಗಿಕೊಂಡು ಕೆಲಸ ಮಾಡುವುದರಿಂದ ಭವಿಷ್ಯದಲ್ಲಿ ಅರೋಗ್ಯ ಸಂಬಂಧಿ ಕಾಯಿಲೆಗಳು ಬರುವ ಸಾಧ್ಯತೆ ಇದೆ.

ಎಷ್ಟೇ ಕಷ್ಟದ ಕೆಲಸ ಮಾಡಿದರು, ದಿನವಿಡೀ ದುಡಿದರು ಮನುಷ್ಯನಾದ ಮೇಲೆ ಅವರಿಗೆ ರಜೆಗಳ ಅವಶ್ಯಕತೆ ಏರುತ್ತದೆ ಈ ರಜೆಗಳು ಎಷ್ಟರ ಮಟ್ಟಿಗೆ ಮಾಲ್ಗಳಲ್ಲಿ ದುಡಿಯುವ ಕಾರ್ಮಿಕರಿಗೆ ಸಿಗುತ್ತಿದೆ. ಎನ್ನುದನ್ನು ಈ ಕೆಳಗಿನ ಕೋಷ್ಟಕದಲ್ಲಿ ನೀಡಲಾಗಿದೆ.

ಕೋಷ್ಟಕ ೪.೬. ಮಾಹಿತಿದಾರರಿಗೆ ಲಭ್ಯವಿರುವ ಸರ್ಕಾರಿ ರಜಾ ದಿನಗಳು

| ಕ್ರಮ ಸಂಖ್ಯೆ | ಸರಕಾರಿ ರಜೆ | ಸಂಖ್ಯೆ | ಶೇಕಡವಾರು ಪ್ರಮಾಣ |
|---|---|---|---|
| ೧ | ಹೌದು | ೧೮ | ೨೬ |
| ೨ | ಇಲ್ಲ | ೫೨ | ೭೪ |
| | ಒಟ್ಟು | ೭೦ | ೧೦೦ |




ಈ ಮೇಲ್ಕಂಡ ಅಂಕಿಅಂಶಗಳ ಪ್ರಕಾರ ಶೇಕಡಾ ೨೬ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರುಸರಕಾರಿ ರಜೆಗಳು ಇದೆ ಎಂದರೆ, ಶೇಕಡಾ ೭೪ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಸರಕಾರಿ ರಜೆಗಳು ಇಲ್ಲ ಎಂದಿದ್ದಾರೆ.ಇದರಿಂದ ತಿಳಿಯುದೇನೆಂದರೆ ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ವರ್ಷವಿಡಿ ದುಡಿದರು ಅವರಿಗೆ ಅವಶ್ಯಕವಾದ ಹಬ್ಬಹರಿ ದಿನಗಳಿಗೂ ದುಡಿಯಬೇಕು. ಇವರು ತಮ್ಮ ವೇತನಕ್ಕಿಂತ ಹೆಚ್ಚಾಗಿಯೇ ದುಡಿಯುತ್ತಾರೆ ಎನ್ನಬಹುದು.

ಬಡ ಜನರು ತಾವು ದುಡಿದ ಹಣವನ್ನು ತಮ್ಮ ಮೂಲ ಅವಶ್ಯಕತೆಗಳನ್ನು ಪೂರೈಸಲು ಉಪಯೋಗಿಸಿದರೆ ಅವರ ಭವಿಷ್ಯಕ್ಕೆಂದು ಉಳಿತಾಯ ಮಾಡಲು ಸಾದ್ಯವಿಲ್ಲ ಇಂತಹ ಸಮಯದಲ್ಲಿ ಕೆಲಸದ ಭವಿಷ್ಯನಿಧಿಯು ಅವರ ಜೀವನಕ್ಕೆ ಆಧಾರವಾಗುತ್ತದೆ. ಇಂತಹ ಭವಿಷ್ಯ ನಿಧಿಯ ಬಗ್ಗೆ ವಿವರಣೆ ಈ ಕೆಳಕಂಡಂತಿವೆ.

**ಕೋಷ್ಟಕ ೪.೭. ಮಾಹಿತಿದಾರರಿಗೆ ಲಭ್ಯವಿರುವ ಭವಿಷ್ಯ ನಿಧಿ**

| ಕ್ರಮ ಸಂಖ್ಯೆ | ಆರೋಗ್ಯ ವಿಮೆ | ಸಂಖ್ಯೆ | ಶೇಕಡವಾರು ಪ್ರಮಾಣ |
|---|---|---|---|
| ೧ | ಹೌದು | ೪೯ | ೭೦ |
| ೨ | ಇಲ್ಲ | ೨೧ | ೩೦ |
| | ಒಟ್ಟು | ೭೦ | ೧೦೦ |



ಈ ಮೇಲ್ಕಂಡ ಅಂಕಿಅಂಶಗಳ ಪ್ರಕಾರ ಶೇಕಡಾ ೨೪ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಈ ವಲಯದಲ್ಲಿ ಭವಿಷ್ಯ ನಿಧಿಯ ಸೌಲಭ್ಯ ಇಲ್ಲ ಎಂದರೆ ಶೇಕಡಾ ೭೬ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಈ ವಲಯದಲ್ಲಿ ಸೌಲಭ್ಯ ಇದೆ ಎಂದಿದ್ದಾರೆ ಇದರಿಂದ ತಿಳಿಯುದೇನೆಂದರೆ ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರ ವೇತನವನ್ನು ಉಳಿತಾಯ ಮಾಡಲು ಸಾದ್ಯವಾಗದಿದ್ದರು ಈ ಭವಿಷ್ಯ ನಿಧಿಗಳು ಅವರ ಭವಿಷ್ಯಕ್ಕೆ ಆಧಾರ ವಾಗಲಿ ಆದರೆ ಇದು ಎಷ್ಟರ ಮಟ್ಟಿಗೆ ನಿಜ ಎಂದು ತಿಳಿಯದು.

ಮನುಷ್ಯನು ತನ್ನ ಸಾಮರ್ಥ್ಯಕ್ಕಿಂತ ಹೆಚ್ಚಿಗೆ ದುಡಿಯಲು ಸಾಧ್ಯವಿಲ್ಲ ಆದರೆ ಮಾಲ್ ಗಳಂತಹ ಅಸಂಘಟಿತ ವಲಯಗಳಲ್ಲಿ ಮಹಿಳೆಯರು ಅವರ ವೇತನಕ್ಕಿಂತ ಹೆಚ್ಚಾಗಿ ದುಡಿಸುತ್ತಿರುವುದರ ಬಗ್ಗೆ ವಿವರಣೆ ಕೆಳಗಿನಂತಿವೆ.

**ಕೋಷ್ಟಕ ೪.೮. ಮಾಹಿತಿದಾರರು ದುಡಿಯುವ ಸಮಯ**

| ಕ್ರಮ ಸಂಖ್ಯೆ | ದುಡಿಯುವ ಸಮಯ | ಸಂಖ್ಯೆ | ಶೇಕಡವಾರು ಪ್ರಮಾಣ |
|---|---|---|---|
| ೧ | ಏಳು | ೩ | ೪ |
| ೨ | ಎಂಟು | ೩೨ | ೪೬ |
| ೩. | ಒಂಭತ್ತು | ೩೫ | ೫೦ |
| | ಒಟ್ಟು | ೭೦ | ೧೦೦ |




ಈ ಮೇಲ್ಕಂಡ ಅಂಕಿಅಂಶಗಳ ಪ್ರಕಾರ ಶೇಕಡಾ ೪ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ದಿನದ ೭ ಗಂಟೆ ದುಡಿದರೆ, ಶೇಕಡಾ ೪೬ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಎಂಟು ಗಂಟೆಗಳ ಕಾಲ ದುಡಿಯುತ್ತಾರೆ ಮತ್ತು ಶೇಕಡಾ ೫೦ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳೆಯರು ಎಂಟಕ್ಕಿಂತ ಹೆಚ್ಚು ಗಂಟೆಗಳ ಕಾಲ ದುಡಿಯುತ್ತಾರೆ.ಇದರಿಂದ ತಿಳಿಯುದೇನೆಂದರೆ ಮಾಲ್ಗಳಲ್ಲಿ ಹೆಚ್ಚಿನ ಮಹಿಳೆಯರನ್ನು ದಿನವಿಡೀ ದುಡಿಸಿ ಶೋಷಣೆ ಮಾಡುತ್ತಿದ್ದಾರೆ.

ಶಿಕ್ಷಿತರಾದರು ಮಹಿಳೆಯರು ದೈಹಿಕ ಶ್ರಮದ ಕೆಲಸಗಳಲ್ಲಿ ತೊಡಗಿರುವುದು ಅವರಿಗೆ ಜೀವನದಲ್ಲಿ ಇರುವ ಒತ್ತಡಗಳ ಬಗ್ಗೆ ತಿಳಿಸುತ್ತದೆ.ಇದರ ಬಗ್ಗೆ ವಿವರಗಳು ಈ ಕೆಳಗಿನಂತಿವೆ

**ಕೋಷ್ಟಕ ೪.೯. ಮಾಹಿತಿದಾರರಿಗೆ ದೈಹಿಕ ಶ್ರಮ ಉಪಯೋಗಿಸುವುದು**

| ಕ್ರಮ ಸಂಖ್ಯೆ | ದೈಹಿಕ ಶ್ರಮ | ಸಂಖ್ಯೆ | ಶೇಕಡವಾರು ಪ್ರಮಾಣ |
|---|---|---|---|
| ೧ | ಹೌದು | ೩೨ | ೪೬ |
| ೨ | ಇಲ್ಲ | ೩೮ | ೫೪ |
| | ಒಟ್ಟು | ೭೦ | ೧೦೦ |




ಈ ಮೇಲ್ಕಂಡ ಅಂಕಿಅಂಶಗಳ ಪ್ರಕಾರ ಶೇಕಡಾ ೪೬ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ದೈಹಿಕ ಶ್ರಮದ ಕೆಲಸದಲ್ಲಿ ತೊಡಗಿದ್ದಾರೆ ಶೇಕಡಾ ೫೪ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ದೈಹಿಕ ಶ್ರಮ ರಹಿತ ದುಡಿಮೆಯಲ್ಲಿ ತೊಡಗಿರುವುದು ಕಾಣಬಹುದು. ಇದು ಅವರಿಗೆ ಜೀವನದಲ್ಲಿ ಇರುವಂತಹ ಒತ್ತಡಗಳು ತೊಂದರೆಗಳ ಬಗ್ಗೆ ವಿವರಣೆಯನ್ನು ನೀಡುತ್ತದೆ ಅಂದರೆ

ವಿಧ್ಯಾವಂತರಾದರು ಶ್ರಮದ ದುಡಿಮೆಯಲ್ಲಿ ತೊಡಗಿರುವುದು ಕಂಡರೆ ಮಹಿಳೆಯರ ಮೇಲೆ ನಡೆಯುತ್ತಿರುವ ಶೋಷಣೆಗೆ ಹಿಡಿದ ಕನ್ನಡಿಯಂತಿದೆ

ಮಾನವನು ಎಷ್ಟೇ ದುಡಿದರು ಮಾನಸಿಕವಾಗಿ ಗಟ್ಟಿಯಾಗಿದ್ದರೆ ಮಾತ್ರ ಯಾವುದೇ ಕಷ್ಟವನ್ನು ಎದುರಿಸಲು ಸಾಧ್ಯ. ಈ ಮಾನಸಿಕ ಒತ್ತಡಗಳ ಬಗ್ಗೆ ವಿವರಣೆ ಈ ಕೆಳಗಿನಂತಿವೆ.

**ಕೋಷ್ಟಕ ೪.೧೦. ಮಾಹಿತಿದಾರರಿಗೆ ಮಾನಸಿಕ ಒತ್ತಡ**

| ಕ್ರಮ ಸಂಖ್ಯೆ | ಮಾನಸಿಕ ಒತ್ತಡ | ಸಂಖ್ಯೆ | ಶೇಕಡವಾರು ಪ್ರಮಾಣ |
|---|---|---|---|
| ೧ | ಹೌದು | ೨೧ | ೩೦ |
| ೨ | ಇಲ್ಲ | ೪೯ | ೭೦ |
| | ಒಟ್ಟು | ೭೦ | ೧೦೦ |




ಈ ಮೇಲ್ಕಂಡ ಅಂಕಿಅಂಶಗಳ ಪ್ರಕಾರ ಶೇಕಡಾ ೩೦ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಮಾನಸಿಕ ಒತ್ತಡಗಳನ್ನು ಅನುಭವಿಸುತ್ತಿದ್ದಾರೆ , ಶೇಕಡಾ ೭೦ ರಷ್ಟು ಮಾಲ್ ಗಳಲ್ಲಿ

ದುಡಿಯುವ ಮಹಿಳಾ ಕಾರ್ಮಿಕರು ಮಾನಸಿಕವನ್ನು ಅನುಭವಿಸುತ್ತಿಲ್ಲ ಎಂದರು ಕೆಲಸದ ಒತ್ತಡವು ಮಾನಸಿಕ ಒತ್ತಡವನ್ನು ನೀಡುತ್ತದೆ. ಆದರೆ ಕೆಲವರು ಇಂತಹ ಒತ್ತಡಗಳು ಎಂದು ತಿಳಿದಿರುವುದಿಲ್ಲ.

ಇಂದಿನ ಕಾಲದಲ್ಲಿ ಮಹಿಳೆ ಪುರುಷ ಎಂಬ ಬೇಧ ಭಾವ ವಿಲ್ಲ ಎಲ್ಲರು ಸಮಾನ ಎಂದರು ವಿವಿಧ ಕಾಯಿದೆಗಳು ಇದ್ದರು ಹಲವಾರು ಕಡೆಗಳಲ್ಲಿ ಲಿಂಗ ತಾರತಮ್ಯ ಈಗಲೂ ನಡೆಯುತ್ತಿದೆ. ಇದರ ವಿವರಣೆ ಈ ಕೆಳಗಿನ ಕೋಷ್ಟಕದಲ್ಲಿ ವಿವರಿಸಲಾಗಿದೆ.



**ಕೋಷ್ಟಕ ೪.೧೧. ಮಾಹಿತಿದಾರರ ಲಿಂಗ ತಾರತಮ್ಯ**

| ಕ್ರಮ ಸಂಖ್ಯೆ | ಲಿಂಗ ತಾರತಮ್ಯ | ಸಂಖ್ಯೆ | ಶೇಕಡವಾರು ಪ್ರಮಾಣ |
|---|---|---|---|
| ೧ | ಹೌದು | ೩೨ | ೪೬ |
| ೨ | ಇಲ್ಲ | ೩೮ | ೫೪ |
| | ಒಟ್ಟು | ೭೦ | ೧೦೦ |



ಈ ಮೇಲ್ಕಂಡ ಅಂಕಿಅಂಶಗಳ ಪ್ರಕಾರ ಶೇಕಡಾ ೫೪ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಲಿಂಗ ತಾರತಮ್ಯ ಇಲ್ಲ ಎಂದಿದ್ದಾರೆ. ಶೇಕಡಾ ೪೬ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಲಿಂಗ ತಾರತಮ್ಯ ಇದೆ ಎಂದಿದ್ದಾರೆ. ಇಲ್ಲಿ ಲಿಂಗ ತಾರತಮ್ಯ ಇದೆ ಅಥವಾ ಇಲ್ಲ ಎಂದು ಹೇಳುವವರ ಶೇಕಡವಾರುಗಳಲ್ಲಿ ಹೆಚ್ಚು ವ್ಯತ್ಯಾಸವಿಲ್ಲ ಇದು ಮುಂದುವರಿಯುತ್ತಿರುವ ದೇಶದಲ್ಲಿ ಇಂದಿಗೂ ಈ ರೀತಿಯ ತಾರತಮ್ಯ ಇದೆ ಎಂದು ತೋರಿಸುತ್ತದೆ.

ಸಾಮನ್ಯವಾಗಿ ನಮ್ಮ ವಿದ್ಯಾಭ್ಯಾಸಕ್ಕೂ ನಾವು ಮಾಡುವ ಕೆಲಸಕ್ಕೂ ಸಂಬಂಧ ಇದ್ದಲ್ಲಿ ನಾವು ಆ ಕೆಲಸವನ್ನು ಸರಿಯಾಗಿ ತೃಪ್ತಿಯಿಂದ ಮಾಡಲು ಸಾಧ್ಯ ಇದರ ಬಗ್ಗೆ ವಿವರಗಳು ಈ ಕೆಳಗಿನ ಕೊಷ್ಟಕದಲ್ಲಿದೆ.

**ಕೋಷ್ಟಕ ೪.೧೨. ಮಾಹಿತಿದಾರರ ವಿಧ್ಯಾಭ್ಯಾಸ ಕೆಲಸಕ್ಕೆ ಸಂಬಂಧ**

| ಕ್ರಮ ಸಂಖ್ಯೆ | ವಿದ್ಯಾಭ್ಯಾಸ ಕೆಲಸಕ್ಕೆ ಸಂಬಂಧ | ಸಂಖ್ಯೆ | ಶೇಕಡವಾರು ಪ್ರಮಾಣ |
|---|---|---|---|
| ೧ | ಹೌದು | ೦ | ೦ |
| ೨ | ಇಲ್ಲ | ೭೦ | ೧೦೦ |
| | ಒಟ್ಟು | ೭೦ | ೧೦೦ |



ಈ ಮೇಲ್ಕಂಡ ಅಂಕಿಅಂಶಗಳ ಪ್ರಕಾರ ಶೇಕಡಾ ೧೦೦ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರ ವಿಧ್ಯಾಭ್ಯಾಸಕ್ಕೂ ಅವರು ಮಾಡುವ ಕೆಲಸಕ್ಕೂ ಯಾವುದೇ ಸಂಬಂಧ ವಿಲ್ಲ ಎಂದು ತಿಳಿಸಿದ್ದಾರೆ.ಆಂದರೆ ಅವರು ಮಾಡುವ ಕೆಲಸದಲ್ಲಿ ಅವರು ಪರಿಣತಿಯನ್ನು ಪಡೆದಿಲ್ಲ ಅವರು ತಮ್ಮ ಕೆಲಸದಲ್ಲಿ ತೃಪ್ತರಲ್ಲ ಎಂದು ಕಂಡುಹಿಡಿಯಬಹುದು.

ಸಾಮಾನ್ಯವಾಗಿ ಶಿಕ್ಷಿತರು ಮಾಲ್ಗಲ್ಲಿ ದುಡಿಯುತ್ತಾರೆ ಎಂದರೆ ಹಲವಾರು ಒತ್ತಡಗಳು ಇದ್ದಾಗ ಮಾತ್ರ ಅವುಗಳ ವಿವರಣೆಗಳು ಈ ಕೆಳಗಿನಂತಿವೆ.

**ಕೋಷ್ಟಕ ೪.೧೩. ಮಾಹಿತಿದಾರರು ಈ ವಲಯ ಅಯ್ಕೆಮಾಡಿರಲು ಕಾರಣ**

| ಕ್ರಮ ಸಂಖ್ಯೆ | ಈ ವಲಯದ ಆಯ್ಕೆಗೆ ಕಾರಣ | ಸಂಖ್ಯೆ | ಶೇಕಡವಾರು ಪ್ರಮಾಣ |
|---|---|---|---|
| ೧ | ಹಣಕಾಸಿನ ಅವಶ್ಯಕತೆ | ೩೨ | ೪೬ |
| ೨ | ಬೇರೆಯಾವುದೇ ಕೆಲಸ ಸಿಗದಿರುವುದು | ೩೮ | ೫೪ |
| ೩ | ಇತರೆ | ೦ | ೦ |
| | ಒಟ್ಟು | ೭೦ | ೧೦೦ |




ಈ ಮೇಲ್ಕಂಡ ಅಂಕಿಅಂಶಗಳ ಪ್ರಕಾರ ಶೇಕಡಾ ೪೬ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು  ಹಣಕಾಸಿನ ಅವಶ್ಯಕತೆ ಇರುವುದರಿಂದ ಈ ಮಾಲ್ ಗಳಲ್ಲಿ ದುಡಿಯುತ್ತಿದ್ದರೆ.ಶೇಕಡಾ ೫೪ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಬೇರೆ ಯಾವುದೇ ಕೆಲಸ ಸಿಗದಿರುವುದೆ ಕಾರಣವಾಗಿದೆ.ಇತರೆ ಯಾವುದೇ ಕಾರಣಗಳನ್ನು ಅವರು ವ್ಯಕ್ತ ಪಡಿಸಿಲ್ಲ. ಇದರಿಂದ ತಿಳಿಯುವುದೇನೆಂದರೆ ಇವರು ಯಾರು ತಮ್ಮ ಸ್ವಂತ ಇಚ್ಚೆಯಿಂದ ಇಷ್ಟ ಪಟ್ಟು ಈ ಮಾಲ್ಗಲ್ಲಿ ದುಡಿಯುತ್ತಿಲ್ಲ ಬೇರೆ ಯಾವುದೇ ಕೆಲಸ ಸಿಕ್ಕರು ಅವರು ಇದನ್ನು ಬಿಟ್ಟು ಹೋಗಲು ಸಿದ್ದರಿದ್ದಾರೆ.

ದಿನವಿಡೀ ದುಡಿಯುವ ಮಾನವನ ಕೆಲಸದ ಭಂಗಿಯು ಕೆಲಸದ ಒತ್ತಡವನ್ನು ತಿಳಿಸುತ್ತದೆ. ಈ ಬಗ್ಗೆ ವಿವರಣೆ ಈ ಕೆಳಗಿಂತಿವೆ.

**ಕೋಷ್ಟಕ ೪.೧೪. ಮಾಹಿತಿದಾರರ ಕೆಲಸದ ಭಂಗಿ**

| ಕ್ರಮ ಸಂಖ್ಯೆ | ಕೆಲಸದ ಭಂಗಿ | ಸಂಖ್ಯೆ | ಶೇಕಡವಾರು ಪ್ರಮಾಣ |
|---|---|---|---|
| ೧ | ಆಸನದಲ್ಲಿ ಕೂತು | ೪ | ೬ |
| ೨ | ನಡೆದಾಡಿ | ೭ | ೧೦ |
| ೩ | ನಿಂತು ಕೊಂಡು | ೪೯ | ೭೦ |
| ೪ | ನೆಲದ ಮೇಲೆ ಕೂತು | ೧೦ | ೧೪ |
| | ಒಟ್ಟು | ೭೦ | ೧೦೦ |




ಈ ಮೇಲ್ಕಂಡ ಅಂಕಿಅಂಶಗಳ ಪ್ರಕಾರ ಶೇಕಡಾ ೬ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಆಸನದಲ್ಲಿ ಕೂತು ಕೆಲಸ ಮಾಡಿದರೆ ಶೇಕಡಾ ೧೦ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ನಡೆದಾಡಿಕೊಂಡು ಕೆಲಸ ಮಾಡುವರು ಶೇಕಡಾ ೭೦ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ನಿಂತುಕೊಂಡು ಕೆಲಸ ಮಾಡುತ್ತಾರೆ. ಮತ್ತು ಶೇಕಡಾ ೧೪ ರಷ್ಟು ಮಾಲ್

ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ನೆಲದ ಮೇಲೆ ಕೂತು ದುಡಿಯುತ್ತಾರೆ. ಇದರಿಂದ ತಿಳಿಯುವುದೇನೆಂದರೆ ಮಹಿಳೆಯರು ದುಡಿಯುವ ಈ ಭಂಗಿಗಳು ಅವರ ಭವಿಷ್ಯದ ಮೇಲೆ ಪರಿಣಾಮ ಬೀರುತ್ತದೆ. ಇದರಿಂದಾಗಿ ಅವರಿಗೆ ಸಂತಾನೋತ್ಪತಿಗು ತೊಂದರೆಯು ಆಗುವ ಸಾದ್ಯತೆ ಇದೆ.

ಮಾನವನಿಗೆ ಕೆಲಸದಲ್ಲಿ ತೃಪ್ತಿ ಸಿಗುವ ಸೌಲಭ್ಯದ ಮೇಲೆ ಅವಲಂಬಿಸಿರುತ್ತದೆ ಇದರ ಬಗ್ಗೆ ಮಾಹಿತಿದಾರರು ನೀಡಿರುವ ವಿವರಣೆ ಈ ಕೆಳಗಿನಂತಿವೆ.

**ಕೋಷ್ಟಕ ೪.೧೫. ಮಾಹಿತಿದಾರರಿಗೆ ಇರುವ ತೃಪ್ತಿ**

| ಕ್ರಮ ಸಂಖ್ಯೆ | ಕೆಲಸದ ತೃಪ್ತಿ | ಸಂಖ್ಯೆ | ಶೇಕಡವಾರು ಪ್ರಮಾಣ |
|---|---|---|---|
| ೧ | ಉನ್ನತ ಮಟ್ಟದಲ್ಲಿ ನೀಡಿಲ್ಲ | ೭ | ೧೦ |
| ೨ | ಸಮಾಧಾನವಿಲ್ಲ | ೪೨ | ೬೦ |
| ೩ | ಸಮಾಧಾನವಿದೆ | ೨೧ | ೩೦ |
| | ಒಟ್ಟು | ೭೦ | ೧೦೦ |



ಈ ಮೇಲ್ಕಂಡ ಅಂಕಿಅಂಶಗಳ ಪ್ರಕಾರ ಶೇಕಡಾ ೧೦ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಅವರ ಕೆಲಸವು ಉನ್ನತ ಮಟ್ಟದಲ್ಲಿ ತೃಪ್ತಿಯನ್ನು ನೀಡಿಲ್ಲ, ಶೇಕಡಾ ೬೦ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರಿಗೆ ಅವರ ಕೆಲಸದ ಬಗ್ಗೆ ಸಮಾಧಾನವಿಲ್ಲ ಮತ್ತು ಶೇಕಡಾ ೩೦ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರಿಗೆ ಸಮಾಧಾನವಿಲ್ಲ. ಇದರಿಂದ ತಿಳಿಯುವುದೇನೆಂದರೆ ಈ ಮಾಲ್ ಗಳಲ್ಲಿ ದುಡಿಯುವ ಕಾರ್ಮಿಕರಲ್ಲಿ ಹೆಚ್ಚಿನವರಿಗೆ ಅವರ ಕೆಲಸದಲ್ಲಿ ಸಮಾಧಾನವಿಲ್ಲ.

ಸಾಮಾನ್ಯವಾಗಿ ಎಲ್ಲರು ದುಡಿಯುವುದು ಅವರವ ಅವಶ್ಯಕತೆಗಳನ್ನು ಪೂರೈಸಲು ಈ ವೇತನದ ಖರ್ಚಿನ ನಿಯಂತ್ರಣ ಯಾರ ಕೈಯಲ್ಲಿವೆ ಎನ್ನುದು ಇಲ್ಲಿ ಬಹು ಮುಖ್ಯವಾಗುತ್ತದೆ. ಇದರ ಬಗ್ಗೆ ವಿವರಣೆ ಈ ಕೆಳಗಿನಂತಿವೆ.

**ಕೋಷ್ಟಕ ೪.೧೬. ಮಾಹಿತಿದಾರರ ಖರ್ಚಿನ ನಿಯಂತ್ರಣ**

| ಕ್ರಮ ಸಂಖ್ಯೆ | ಖರ್ಚಿನ ನಿಯಂತ್ರಣ | ಸಂಖ್ಯೆ | ಶೇಕಡವಾರು ಪ್ರಮಾಣ |
|---|---|---|---|
| ೧ | ನನ್ನ | ೧೧ | ೧೬ |
| ೨ | ಗಂಡನ | ೧೪ | ೨೦ |
| ೩ | ಪಾಲಕರ | ೪೫ | ೬೪ |
| | ಒಟ್ಟು | ೭೦ | ೧೦೦ |




ಈ ಮೇಲ್ಕಂಡ ಅಂಕಿಅಂಶಗಳ ಪ್ರಕಾರ ಶೇಕಡಾ ೧೮ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರ ಖರ್ಚಿನ ನಿಯಂತ್ರಣ ಅವರವರ ಕೈಯಲ್ಲಿ ಇದ್ದರೆ, ಶೇಕಡಾ ೨೦ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ವಿವಾಹಿತರಾಗಿದ್ದು ಅವರ ಖರ್ಚಿನ ನಿಯಂತ್ರಣ ಅವರ ಗಂಡನ ಕೈಯಲ್ಲಿ ಇದೆ. ಮತ್ತು ೬೪ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಅವಿವಾಹಿತರಾಗಿದ್ದು ಅವರ ಖರ್ಚಿನ ನಿಯಂತ್ರಣ ಅವರ ಪಾಲಕರ ಕೈಯಲ್ಲಿದೆ. ಇದರಿಂದ ತಿಳಿಯುವುದೇನೆಂದರೆ ಇಲ್ಲಿ ಮಹಿಳೆಯರು ಕಷ್ಟ ಪಟ್ಟು ದುಡಿದ ವೇತನವನ್ನು ತನ್ನ ಇಚ್ಛೆಯಂತೆ ಖರ್ಚುಮಾಡುವಂತಿಲ್ಲ.

ಸಾಮಾನ್ಯವಾಗಿ ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಬಡವರಾಗಿದ್ದು ಅವರ ದುಡಿವೆಯನ್ನು ಅವರ ಕುಟುಂಬ ಅವಲಂಬಿಸಿರುತ್ತದೆ.ಇದರ ಬಗ್ಗೆ ಮಾಹಿತಿ ಕೆಳಗಿನಂತಿವೆ.

**ಕೋಷ್ಟಕ ೪.೧೭. ಮಾಹಿತಿದಾರರ ವೇತನ ಅವಲಂಭನೆ**

| ಕ್ರಮ ಸಂಖ್ಯೆ | ವೇತನ ಅವಲಂಭನೆ | ಸಂಖ್ಯೆ | ಶೇಕಡವಾರು ಪ್ರಮಾಣ |
|---|---|---|---|
| ೧ | ೦ ಶೇಕಡಾ | ೦ | ೦ |
| ೨ | ೫೦ ಶೇಕಡಾ | ೭ | ೧೦ |
| ೩ | ೭೫ ಶೇಕಡಾ | ೪೨ | ೬೦ |
| ೪ | ೧೦೦ ಶೇಕಡಾ | ೨೧ | ೩೦ |
| | ಒಟ್ಟು | ೭೦ | ೧೦೦ |



ಈ ಮೇಲ್ಕಂಡ ಅಂಕಿಅಂಶಗಳ ಪ್ರಕಾರ ಶೇಕಡಾ ೩೦ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರ ವೇತನದ ೧೦೦ ಪ್ರತಿಶತ ಅವರ ಕುಟುಂಬವು ಅವಲಂಬಿಸಿದೆ, ಶೇಕಡಾ ೬೦ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರ ವೇತನದ ೭೫ ಪ್ರತಿಶತ ಅವರ ಕುಟುಂಬ ಅವಲಂಬಿಸಿದೆ. ಶೇಕಡಾ ೧೦ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರ ವೇತನದ ೫೦ ಪ್ರತಿಶತ ಅವರ ಕುಟುಂಬ ಅವಲಂಬಿದೆ. ಅಲ್ಲದೆ ಅವರ ಆದಾಯವನ್ನು ಅವಲಂಬಿಸಿರದ ಕುಟುಂಬಗಳೇ ಇಲ್ಲ . ಇದರಿಂದ ತಿಳಿಯುವುದೆನೆಂದರೆ ಮಹಿಳೆಯರು ತಮ್ಮ ದುಡಿಮೆಯಿಂದ ತಮ್ಮ ಕುಟುಂಬದ ಜವಬ್ದಾರಿಯನ್ನುನಿಬಾಯಿಸುತ್ತಿದ್ದಾರೆ.

ನಾವು ದುಡಿಯುವುದು ಅದನ್ನು ಖರ್ಚು ಮಾಡುವುದು ಸಾಮಾನ್ಯ ಆದರೆ ಅದು ಯಾವ ಉದ್ದೇಶಕ್ಕಾಗಿ ಖರ್ಚಾಗುತ್ತಿದೆ. ಎಂದು ತಿಳಿಯುವುದು ಮುಖ್ಯ ಅದರ ಬಗ್ಗೆ ವಿವರಣೆ ಈ ಕೆಳಗಿನಂತಿವೆ.

**ಕೋಷ್ಟಕ ೪.೧೮. ಮಾಹಿತಿದಾರರ ವೇತನದ ಖರ್ಚಿನ ಉದ್ದೇಶ**

| ಕ್ರಮ ಸಂಖ್ಯೆ | ವೇತನದ ಖರ್ಚಿನ ಉದ್ದೇಶ | ಸಂಖ್ಯೆ | ಶೇಕಡವಾರು ಪ್ರಮಾಣ |
|---|---|---|---|
| ೧ | ಉಳಿತಾಯ | ೭ | ೧೦ |
| ೨ | ಮನೆಖರ್ಚು | ೪೯ | ೭೦ |
| ೩ | ಸಾಲ ತೀರಿಸಲು | ೧೪ | ೨೦ |
| ೪ | ವಸ್ತ್ರಾಭರಣ ಖರೀದಿ | ೦ | ೦ |
| | ಒಟ್ಟು | ೭೦ | ೧೦೦ |




ಈ ಮೇಲ್ಕಂಡ ಅಂಕಿಅಂಶಗಳ ಪ್ರಕಾರ ಶೇಕಡಾ ೧೦ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಉಳಿತಾಯದ ದೃಷ್ಟಿಯಿಂದ , ಶೇಕಡಾ ೭೦ ರಷ್ಟು ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಮನೆಖರ್ಚಿನ ಉದ್ದೇಶದಿಂದ , ಶೇಕಡಾ ೨೦ ರಷ್ಟುಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು

ಸಾಲ ತೀರಿಸಲು ತಾವು ದುಡಿದ ವೇತನವನ್ನು ಖರ್ಚು ಮಾಡುತ್ತಾರೆ. ಎಂದಿದ್ದಾರೆ ಅಲ್ಲದೆ ಯಾರು ವಸ್ತ್ರಾಭರಣ ಕೊಳ್ಳಲು ಖರ್ಚು ಎಂದು ತಿಳಿಸಿಲ್ಲ ಇದರಿಂದ ತಿಳಿಯುವುದೆನೆದರೆ ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಬಡವರಾಗಿದ್ದು ತಮ್ಮ ಮೂಲ ಅಗತ್ಯಗಳನ್ನು ಪೂರೈಸಲು ಅವರು ತಮ್ಮ ವೇತನವನ್ನು ಉಪಯೋಗಿಸುತ್ತಾರೆ.

### ೪.೧೯.ಮಾಲ್ ಗಳಲ್ಲಿ ದುಡಿಯುವ ಮಹಿಳೆಯರ ಅಭಿಪ್ರಾಯಗಳು

ಅವರು ತಕ್ಕಮಟ್ಟಿಗೆ ವಿಧ್ಯಾವಂತರಾದರು ಅವರ ಆರ್ಥಿಕ ಪರಿಸ್ಥಿತಿ ಉತ್ತಮವಾಗಿಲ್ಲದೆ ಇರುವುದರಿಂದ ಅವರಿಗೆ ವಿದ್ಯಾಭ್ಯಾಸವನ್ನು ಮುಂದುವರಿಸಲು ಸಾಧ್ಯವಾಗದೆ ಕೆಲಸಕ್ಕೆ ಸೇರಬೇಕಾಯಿತು. ಮನೆ ನಡೆಸಲು ಹಣದ ಅವಶ್ಯಕತೆ ಇದ್ದು ಅದಕ್ಕಾಗಿ ಈ ಮಾಲ್ ಗಳನ್ನು ಆಯ್ಕೆಮಾಡಿರುತ್ತಾರೆ ಎಂದರೆ

ಮದುವೆ ಖರ್ಚಿಗಾಗಿ, ಸಾಲತೀರಿಸಲು ಬೇರೆ ಯಾವ ದಾರಿ ಇಲ್ಲದೆ ಈ ಉದ್ಯೋಗವನ್ನು ಆಯ್ದು ಕೊಡಿರುವುದಾಗಿ ಹೇಳಿದ್ದಾರೆಅವರಿಗೆ ಇದೆ ಉದ್ಯೋಗದಲ್ಲಿ ಮುಂದುವರಿಯಲು ಇಷ್ಟವಿಲ್ಲ ಬೇರೆ ಯಾವುದಾದರು ಉತ್ತಮ ಕೆಲಸ ಸಿಕ್ಕಿದ್ದಲ್ಲಿ ಈ ಉದ್ಯೋಗ ಬಿಡುವ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

## ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರ ಸಮಸ್ಯೆಗಳನ್ನು ಸರಿಪಡಿಸಲು ಅವರ ಕೊಟ್ಟಿರುವ ಸಲಹೆಗಳು

ಉದ್ಯೋಗದ ಅವಧಿಯಲ್ಲಿ ಬದಲಾದಣೆ ಮಾಡುವುದು ಕತ್ತಲಾಗುವ ಮೊದಲು ಮನೆಗೆ ಕಳುಹಿಸುವುದು, ಸರಕಾರಿ ರಜೆಗಳನ್ನು ನೀಡುವುದು. ಮುಲಭೂತ ಸೌಕರ್ಯಗಳನ್ನು ಒದಗಿಸುವುದು, ಕೆಲಸದಲ್ಲ ಒತ್ತಡವನ್ನು ಕಡಿಮೆಮಾಡುವುದು ಇ. ಎಸ್. ಐ. ಆರೋಗ್ಯ ವಿಮೆ, ಮತ್ತು ಕಾರ್ಮಿಕ ಭವಿಷ್ಯ ನಿಧಿ ಸೌಲಭ್ಯ ಒದಗಿಸುವುದು. ಲಿಂಗ ತಾರತಮ್ಯವಿಲ್ಲದೆ ವೇತನ ಪಾವತಿ ಮಾಡುವುದು. ಕಾಲಕಾಲಕ್ಕೆ ದೊರಕಬೇಕಾದ ಸೌಲಭ್ಯಗಳೊಂದಿಗೆ ಬೋನಸ್ಸು ದೊರೆಕುವಂತೆ ನೋಡಿಕೊಳ್ಳುವುದು ಮತ್ತು ಮುಂಭಡ್ತಿ ಯನ್ನು ಕಾಲಕಾಲಕ್ಕೆ ಕೊಡುವುದು.

ಮೇಲೆ ತಿಳಿಸಿದಂತಹ ಉಪಾಯಗಳನ್ನು ಮಾಲ್ ಗಳ ಮಾಲಕರು ಸರಕಾರ ,ಮತ್ತು ಸರಕಾರೇತರ ಸಂಸ್ಥೆಗಳು ಅವರ ಸಮಸ್ಯೆಗಳನ್ನು ಆದಷ್ಟು ಪರಿಹರಿಸಿ ಅವರಿಗೆ ಸರಿಯಾದ ಸಾಮಾಜಿಕ ಅರಿವು ಮೂಡಿಸುವ ಹಾಗು ಸಮಾಜದ ಆತ್ಮಸಾಕ್ಷಿಯನ್ನು ಜಾಗೃತಗೊಳಿಸುವ ಕಾರ್ಯವನ್ನು ಮಾಡಬೇಕಾಗಿದೆ. ಆಗ ಮಾತ್ರ ಆದಷ್ಟು ಬೇಗನೆ ಮಹಿಳೆ ತಮ್ಮನ್ನು ಕಾಡುವ ಸಮಸ್ಯೆಗಳಿಂದ ಒಂದಿಷ್ಟಾದರೂ ಉಪಶಮನತೆ ಪಡೆಯಬಹುದಾಗಿದೆ.

# ಅಧ್ಯಾಯ ೫

## ಸಲಹೆ, ಸೂಚನೆಗಳು ಮತ್ತು ಸಂಹಾರ

೫.೧ ಸಾರಾಂಶ

೫.೨ ಸಲಹೆ ಸೂಚನೆಗಳು

೫.೩ ಸಮಾಪ್ತಿ

# ಸಲಹೆ, ಸೂಚನೆಗಳು ಮತ್ತು ಸಂಹಾರ

ಅಧ್ಯಯನದ ಆಧಾರದ ಸಾರಾಂಶ ಮತ್ತು ಫಲಿತಾಂಶಗಳನ್ನು ಕೊನೆಯಲ್ಲಿ ನೀಡಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಗ್ರಂಥಗಳು,ಲೇಖನಗಳು, ವರದಿ ಮತ್ತು ವಿಮರ್ಶೆಯ ಮೂಲಕ ವಿಶ್ಲೇಷಣೆ ಮಾಡಿ ಮಾಹಿತಿ ಸಂಗ್ರಹಣೆ ಮಾಡುದರ ಜೊತೆಗೆ ಕ್ಷೇತ್ರಾಧಾರಿತ ಅಧ್ಯಯನವನ್ನು ಮಾಡಲಾಗಿದೆ. ಈ ಅಧ್ಯಯನದಲ್ಲಿ ಆವಿಷ್ಕಾರ ಮತ್ತು ಅವಲೋಕನಗಳ ಆಧಾರದ ಮೇಲೆ ಮಹಿಳಾ ಕಾರ್ಮಿಕರ ಅಭಿವೃದ್ಧಿಗೆ ಸಲಹೆಗಳನ್ನು ಹಾಗು ಉಪಸಂಹಾರವನ್ನು ನೀಡಲಾಗಿದೆ.

ದೇಶವು ಮುಂದುವರಿಯುತ್ತಾ ಬರುವ ಹಾಗೆ ನಾವು ನಮ್ಮ ಚಿಂತನೆ ಯೋಚನೆಗಳಲ್ಲಿ ಬದಲಾವಣೆಗಳನ್ನು ತಂದುಕೊಳ್ಳಬೇಕು ಮಹಿಳಾ ಸಬಲೀಕರಣ ಎನ್ನುವುದು ಬಾಷಣದ ವಿಷಯವಾಗಿಯೇ ಉಳಿಯುವುದಲ್ಲ ಅದು ನಿಜ ಸ್ವರೂಪ ಪಡೆದು ಮಹಿಳೆಯರು ಅದರ ಸದುಪಯೋಗ ಪಡೆಯುವಂತಾಗ ಬೇಕು. ಮಾಲ್ ಗಳಂತಹ  ಅಸಂಘಟಿತ ವಲಯದ  ಕಾರ್ಮಿಕರು ವಿವಿಧ ಸವಲತ್ತುಗಳಿಂದ ವಂಚಿತರಾಗಿದ್ದಾರೆ. ಇಂದಿನ ಬೆಲೆ ಏರಿಕೆಯ ದಿನಗಳಲ್ಲಿ ಜೀವನ ಸಾಗಿಸುವುದೇ ಕಷ್ಟವಾಗುತ್ತಿದೆ. ಬರುವ ಅಲ್ಪ ವರಮಾನದಲ್ಲಿಯೇ ಮಕ್ಕಳಿಗೆ ಶಿಕ್ಷಣ ಕೊಡಿಸಲು ಸಾಧ್ಯವಾಗದಂತಿದೆ. ಸರಕಾರದ ಇಚ್ಚಾಶಕ್ತಿಯ ಕೊರತೆಯಿಂದ ಇಂದಿಗೂ ಕೂಡ ಕೋಟ್ಯಾಂತರ ಜನ ಮೂಲಭೂತ ಸೌಲಭ್ಯ ವಂಚಿತರಾಗಿದ್ದಾರೆ. ದೇಶದ ಸಂಪತ್ತನ್ನು ಬೆಳೆಸುವ, ದುಡಿಯುವ ವರ್ಗದ ಜನ ಅದರ ಲಾಭದಲ್ಲಿ ಪಾಲುದಾರರಾಗುತ್ತಿಲ್ಲ.

ಈಚೆಗಷ್ಟೇ ಅಸಂಘಟಿತ ವಲಯದ ಕಾರ್ಮಿಕರ ಕಲ್ಯಾಣ ಮಂಡಳಿ ಜಾರಿಗೆ ಬಂದಿದ್ದು ಅದು ಅಂಬೆಗಾಲಿಡುತ್ತಿದೆ. ಅಸಂಘಟಿತ ವಲಯದ ಕಾರ್ಮಿಕರಿಗೆ ಸೌಲಭ್ಯ ಕಲ್ಪಿಸುವ ಮೂಲಕ ಸಾಮಾಜಿಕ ಭದ್ರತೆ ಕಲ್ಪಿಸಿ ಕೊಡಬೇಕಾಗಿದೆ. ಮಹಿಳಾ ಸಮಸ್ಯೆಗಳನ್ನು ಹೋಗಲಾಡಿಸಲು ಸರಕಾರವು ಹಲವಾರು ಕಾರ್ಯಕ್ರಮಗಳನ್ನು ರೂಪಿಸಿದ್ದರು ಈ ಕಾರ್ಯಕ್ರಮಗಳು ಎಲ್ಲರನ್ನು ತಲುಪುತ್ತಿಲ್ಲ. ಮಾಲ್ ಗಳಲ್ಲಿ ದುಡಿಯುವ  ಮಹಿಳಾ ಉದ್ಯೋಗಿಗಳ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯು ಇನ್ನೂ ಹಿಂದುಳಿದಿದೆ. ಎನ್ನುವುದು ಅಧ್ಯಯನದ ಊಹೆಯಾಗಿದ್ದರು ಕ್ಷೇತ್ರಕಾರ್ಯದ ಸಮಯದಲ್ಲಿ ಮಹಿಳಾ ಕಾರ್ಮಿಕರು ತಮ್ಮ ಸಾಮಾಜಿಕ ಆರ್ಥಿಕ ಸ್ಥಿತಿ ಉತ್ತಮವಾಗಿದೆ ಎಂದು ತಿಳಿಸಿರುತ್ತಾರೆ ಆದರೆ ಮಾಹಿತಿದಾರರು ತಮ್ಮ ಸಾಮಾಜಿಕ ಆರ್ಥಿಕ ಪರಿಸ್ಥಿತಿ ಉತ್ತಮವಾಗಿರಲು ಸರಕಾರದಿಂದ ಯಾವುದೇ ರೀತಿಯ ಸಾಲ ಸೌಲಭ್ಯಗಳು

ದೊರೆಯುತ್ತಿಲ್ಲ ಎಂದು ತಿಳಿಸಿರುತ್ತಾರೆ. ಇದರಿಂದ ನಾವು ತಿಳಿಯಬಹುದು ಅವರು ತಮಗೆ ನಡೆಯುತ್ತಿರುವ ಶೋಷಣೆಯ ಬಗ್ಗೆ ಯಾರಿಗೂ ತಿಳಿಯಲು ಬಯಸುತ್ತಿಲ್ಲ ಆದರೆ ಅವರ ಸ್ಥಿತಿ ಉತ್ತಮಗೊಳ್ಳಬೇಕು ಎಂಬ ಆಸೆ ಅವರಲ್ಲೂ ಇದೆ.

ಹಂತ ಹಂತದಲ್ಲಿ ಪ್ರತಿಯೊಂದು ರೀತಿಯ ತಾರತಮ್ಯವನ್ನು ಪುರುಷ ಕಾರ್ಮಿಕರೊಡನೆ ಕೆಲಸದಲ್ಲಿ ಹಾಗು ವೇತನದಲ್ಲಿ ತಾರತಮ್ಯವನ್ನು ಅನುಭವಿಸುತ್ತಿದ್ದಾರೆ. ಎನ್ನುವುದು ಅಧ್ಯಯನದಿಂದ ತಿಳಿದುಬಂದಿರುವ ವಿಷಯವಾಗಿದೆ. ಮಾಲ್ ಗಳಲ್ಲಿ ದುಡಿಯುವ ಹೆಚ್ಚಿನ ಎಲ್ಲ ಕಾರ್ಮಿಕರು ವಿದ್ಯಾವಂತರಾದರು ಅವರಿಗೆ ಬೇರೆಯಾವುದೇ ಕೆಲಸ ಸಿಗದೆ ಇರುವದರಿಂದ ಇಲ್ಲಿ ಕೆಲಸ ಮಾಡುತ್ತಿದ್ದು ಅವರ ವಿದ್ಯಾಭ್ಯಾಸಕ್ಕೂ ಅವರ ದುಡಿಮೆಗೂ ಸಂಬಂಧ ಇಲ್ಲದಂತಾಗಿದೆ.

. ಮಹಿಳಾ ಕಾರ್ಮಿಕರು ಹೆಚ್ಚಿನ ಆದಾಯಕ್ಕಾಗಿ ಹೆಚ್ಚು ಸಮಯ ದುಡಿಯಬೇಕಾಗುತ್ತದೆ.ಹೀಗೆ ಹೆಚ್ಚು ಸಮಯ ದುಡಿಯುವುದರಿಂದ ದೈಹಿಕ ತೊಂದರೆಗಳು ಕಾಣಿಸಿಕೊಳ್ಳುತ್ತವೆ. ಅಲ್ಲದೆ ಇನ್ನೂ ಅನೇಕ ಕಷ್ಟಗಳನ್ನು ಎದುರಿಸಬೇಕಾಗುತ್ತದೆ. ಇವರ ನೋವುಗಳಿಗೆ ಸ್ಪಂದಿಸಿ ಈ ತೊಂದರೆಗಳಿಂದ ಪಾರು ಮಾಡಲು ಸರಕಾರ ಮತ್ತು ಸಂಘ ಸಂಸ್ಥೆಗಳು ಹಲವಾರು ನೀತಿ ನಿಯಮ ಕಾನೂನುಗಳನ್ನು ಜಾರಿಗೊಳಿಸಿ ಮುಂದೆ ಬಂದಿರುವುದು ಶ್ಲಾಘನೀಯ .

ಇಲ್ಲಿ ಮಾಲ್ ಗಳಲ್ಲಿ ದುಡಿಯುವ ಮಹಿಳೆಯರ ಅಭಿಪ್ರಾಯವನ್ನು ಈ ಅಧ್ಯಯದಲ್ಲಿ ವಿವರಿಸಿದ್ದು ಮುಂದಿನ ಅಧ್ಯಯದಲ್ಲಿ ಅವರ ಸಮಸ್ಯೆಗಳಿಗೆ ಕೆಲವು ಸಲಹೆಗಳನ್ನು ಮುಂದಿನ ಅಧ್ಯಯದಲ್ಲಿ ನೀಡಲಾಗಿದೆ.

## ೫.೧. ಸಾರಂಶ

ಈ ಅಧ್ಯಯನದ ಸಮಾಪ್ತಿಯಲ್ಲಿ ತಿಳಿಯುವುದೇನೆಂದರೆ ಅಸಂಘಟಿತ ವಲಯದ ಕಾರ್ಮಿಕರ ತೊಂದರೆಗಳನ್ನು ವಿವರಿಸುವುದು ಬಹಳ ಕಷ್ಟ.ಏಕೆಂದರೆ ಅವರು ಅನುಭವಿಸುತ್ತಿರುವ ಶೋಷನೆಗಳನ್ನು ವಿವರಿಸಿದಷ್ಟು ಮುಗಿಯದು ಅಸಂಘಟಿತ ವಲಯದ ಲಕ್ಷಣಗಳೇನೆಂದರೆ ಕಡಿಮೆ ಕೂಲಿ, ಕಡಿಮೆ ಆದಾಯ, ಅಧಿಕ ಮಹಿಳಾ ಕೆಲಸಗಾರರು, ಬಾಲಕಾರ್ಮಿಕರು ಹೆಚ್ಚಾಗಿ ಕಾಣಸಿಗುತ್ತಾರೆ. ಮಂಗಳೂರಿನ ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಹೆಚ್ಚಾಗಿ ಬಡವರಾಗಿದ್ದು ಉದ್ಯೋಗದ ವಿಚಾರದಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಶೋಷಣೆಗೆ ಒಳಗಾಗಿದ್ದಾರೆ ಎನ್ನುವುದನ್ನು ಗಮನದಲ್ಲಿ ಇರಿಸಿಕೊಂಡು ಈ ಅಧ್ಯಯನವನ್ನು ಮಾಡಲಾಗಿದೆ..

ಈ ಅಧ್ಯಯನದಲ್ಲಿ ಮಾಲ್ ಗಳಂತಹ ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳಾ ಕಾರ್ಮಿಕರ ಸ್ಥಿತಿಗತಿ ಅವರ ವೇತನ ಅವರು ಅನುಭವಿಸುತ್ತಿರುವ ತೊಂದರೆಗಳು, ಶೋಷಣೆಗಳು ಅದಕ್ಕಾಗಿ ಸರಕಾರ ತೆಗೆದುಕೊಂಡಿರುವ ಕ್ರಮಗಳನ್ನು ವಿವರಿಸಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಸಂಘಟಿತ ಮತ್ತು ಅಸಂಘಟಿತ ವಲಯದ ಪರಿಚಸಿ, ಅಸಂಘಟಿತ ವಲಯದ ಕಾರ್ಯ ಕ್ಷೇತ್ರಗಳು ಅಧ್ಯಯನದ ಉದ್ದೇಶಗಳು, ವ್ಯಾಪ್ತಿ, ಮಹತ್ವ, ಅಧ್ಯಯನ ಪ್ರದೇಶದ ಪರಿಚಯವನ್ನು ನೀಡಲಾಗಿದೆ. ಯಾವ ಉದ್ದೇಶಗಳನ್ನು ಮುಂದಿಟ್ಟುಕೊಂಡು ಅಧ್ಯಯನವನ್ನು ಕೈಗೊಳ್ಳಲಾಗಿದೆ. ಅಧ್ಯಯನವು ಯಾಕೆ ಮಹತ್ವಪೂರ್ಣವಾಗಿವೆ. ವ್ಯಾಪ್ತಿಯಲ್ಲಿ ಯಾವೆಲ್ಲಾ ಪರಿಕಲ್ಪನೆಗಳನ್ನು, ವಿಷಯಗಳನ್ನು ಬಳಸಿಕೊಳ್ಳಲಾಗಿದೆ. ಎಂದು ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಅಸಂಘಟಿತ ವಲಯದಲ್ಲಿ ದುಡಿಯುವ ಕಾರ್ಮಿಕರ ಸ್ಥೂಲ ಪರಿಚಯವನ್ನು ನೀಡಲಾಗಿದೆ. ಅದರಲ್ಲಿ ಮಾಲ್ ಗಳಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳು, ಮಾಲ್ ಗಳಲ್ಲಿ ದುಡಿಯುವ ಮಹಿಳೆಯರಿಗೆ ಸಮಾಜದಲ್ಲಿ ಸಿಗುವ ಸ್ಥಾನಮಾನಗಳು, ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರಿಗೆ ಸಿಗುವ ಆದಾಯ ಮತ್ತು ಕೆಲಸದ ಅವಧಿಗಳು,ಮತ್ತು ಮಾಲ್ಗಳಲ್ಲಿ ದುಡಿಯುವ ಮಹಿಳೆಯರು ಈ ವಲಯವನ್ನು ಆಯ್ಕೆ ಮಾಡಿಕೊಂಡಿರುವುದಕ್ಕೆ ಕಾರಣಗಳನ್ನುಚರ್ಚಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಅಧ್ಯಯನದ ಪ್ರಮುಖ ವಿಷಯವಾಗಿರುವ ಮಾಲ್ ಗಳಂತಹ ಅಸಂಘಟಿತ ಕಾರ್ಮಿಕ ವಲಯದ ಸುಧಾರಣೆಗಳನ್ನು, ಅಸಂಘಟಿತ ಸೇವಾ ಭದ್ರತೆಗೆ ಕೈಗೊಳ್ಳುವ ಕಾರ್ಯಕ್ರಮಗಳನ್ನು ಕಾರ್ಮಿಕ ಸಂಘ ಮತ್ತು ಮಹಿಳೆಯರು ಮತ್ತು ಗತಿ ಮಹಿಳಾ ಸಬಲೀಕರಣ ಮತ್ತು ಅಸಂಘಟಿತ ಮಹಿಳಾ ಕಾರ್ಮಿಕರು ಮುಂತಾದ ವಿಷಯಗಳ ಬಗ್ಗೆ ವಿವರಿಸಲಾಗಿದೆ.

ನಾಲ್ಕನೇ ಅಧ್ಯಾಯವು ಮಂಗಳೂರು ತಾಲೂಕಿನ ಮಾಲ್ ಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರಿಂದ ಪಡೆದ ಮಾಹಿತಿ ಮತ್ತು ವಿಶ್ಲೇಷಣೆಗಳನ್ನು ದುಡಿಯುವ ಮಹಿಳೆಯರ ಅಭಿಪ್ರಾಯಗಳನ್ನು ಸಮಸ್ಯೆಯನ್ನು ಸರಿಪಡಿಸುವ ಮಾರ್ಗೋಪಾಯಗಳು, ಇತ್ಯಾದಿ ವಿಷಯಗಳನ್ನು ತಿಳಿಯಪಡಿಸುತ್ತದೆ.

ಕೊನೆಯ ಅಧ್ಯಾಯದಲ್ಲಿ ಸಾರಾಂಶ, ಸಲಹೆ ಸೂಚನೆಗಳು ಮತ್ತು ಉಪಸಂಹಾರವನ್ನು ಪ್ರಸ್ತುತಪಡಿಸಲಾಗಿದೆ. ಕೊನೆಯಲ್ಲಿ ಅನುಬಂಧ, ಪ್ರಶ್ನಾವಳಿಯ ಬಗ್ಗೆ ಮತ್ತು ಪರಾಮರ್ಶನ ಗ್ರಂಥಗಳ ಬಗ್ಗೆ ಮಾಹಿತಿ ನೀಡಲಾಗಿದೆ.

**೫.೨. ಮಹಿಳಾ ಕಾರ್ಮಿಕರ ಅಭಿವೃದ್ಧಿಗೆ ಸಲಹೆ ಸೂಚನೆಗಳು**

ಮಹಿಳಾ ಕಾರ್ಮಿಕರ ನೋವುಗಳಿಗೆ ಸ್ಪಂದಿಸಿ ಈ ತೊಂದರೆಗಳಿಂದ ಪಾರು ಮಾಡಲು ಕೆಲವು ಸಲಹೆ ಸೂಚನೆಗಳ ಮೂಲಕ ಈ ಮಹಿಳೆಯರಿಗೆ ತಕ್ಕಮಟ್ಟಿನ ನ್ಯಾಯ ಒದಗಿಸಬಹುದಾಗಿದೆ. ಈ ಸಂಬಂಧವಾಗಿ ಕೆಲವು ಸಲಹೆಗಳನ್ನು ನೀಡಬಹುದಾಗಿದೆ.

೧. ಮಾಲ್ ಗಳಂತಹ ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳೆಯರಿಗೆ ಅವರ ಅಭಿವೃದ್ಧಿಗೆ ಸರಕಾರ ರೂಪಿಸಿರುವ ನೀತಿ, ನಿಯಮ ಕಾನೂನುಗಳ ಬಗ್ಗೆ ತಿಳಿಯುವಂತೆ ಮಾಡುವುದು.

೨. ಶೋಷಣೆಯ ವಿರುದ್ಧ ದನಿ ಎತ್ತುವಂತೆ ಪ್ರೋತ್ಸಾಹಿಸುವುದು ಶೋಷಣೆಗೆ ಹೆದರಿ ಅದನ್ನು ಸಹಿಸಿಕೊಳ್ಳುವ ಮನೋಭಾವದಿಂದ ಹೊರಬರಲು ಅವರಲ್ಲಿ ಆತ್ಮಸ್ಥೈರ್ಯ ತುಂಬುವುದು.

೩. ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವ ಮಹಿಳೆಯರ ವರ್ಗಗಳಿಗೆ ಅನುಗುಣವಾಗಿ ಅವರನ್ನು ಸಂಘಟಿಸಿ ಈ ಮೂಲಕ ಅವರಲ್ಲಿ ಮಾಲಿಕರಿಂದ ಮತ್ತು ಸಹೋದ್ಯೋಗಿಗಳಿಂದ ಎದುರಾಗುವ ಸಮಸ್ಯೆಗಳ ಬಗ್ಗೆ ಜಾಗೃತಿ ಮೂಡಿಸುವುದು.

೪. ಸ್ತ್ರೀಯರಿಗಾಗಿ ಕಾನೂನು ಅರ್ವಿನ ಶಿಬಿರಗಳನ್ನು ಕಾನೂನು ತಜ್ಞರ ನೆರವಿನೊಂದಿಗೆ ಏರ್ಪಡಿಸಿ ಮಹಿಳೆಯರಿಗೆ ಅವರ ಹಕ್ಕು ಹಾಗು ವಿಶೇಷ ಕಾನೂನುಗಳ ಬಗ್ಗೆ ಮನವರಿಕೆ ಮಾಡಿಕೊಡುವುದು.

೫. ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳೆಯರನ್ನು ಸ್ತ್ರಿ ಶಕ್ತಿ ಗುಂಪುಗಳ ಮೂಲಕ ಸಶಕ್ತಗೊಳಿಸುವುದು

೫. ಮಾಲ್ ಗಳಂತಹ ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳೆಯರ ಗಣತಿಕಾರ್ಯವನ್ನು ಕಾರ್ಮಿಕ ಕಲ್ಯಾಣ ಇಲಾಖೆಯ ಮುಖಾಂತರ ಕೈಗೊಂಡು ಅವರಿಗೆ ಕನಿಷ್ಠ ವೇತನ ದೊರೆಯುವಂತೆ ಸರಕಾರ ಕ್ರಮ ಕೈಗೊಳ್ಳುವುದು.

೬. ಉದ್ಯಮಶೀಲ ಮಹಿಳೆಯರಿಗೆ ಬ್ಯಾಂಕುಗಳಲ್ಲಿ ಸಿಗಬಹುದಾದ ಧನಸಹಾಯ ಬಗ್ಗೆ ತಿಳುವಳಿಕೆ ಮೂಡಿಸುವುದು.

೭. ಕುಟುಂಬದಲ್ಲಿ ಮತ್ತು ಉದ್ಯೋಗದ ಸ್ಥಳದಲ್ಲಿ ಮಹಿಳೆಯರ ಮೇಲೆ ಆಗುವ ದೌರ್ಜನ್ಯಗಳನ್ನು ಖಂಡಿಸಿ ಅವರ ವಿರುದ್ಧ ಪ್ರತಿಭಟನೆಯನ್ನು ಹಮ್ಮಿಕೊಳ್ಳುವುದು ಮತ್ತು ರಕ್ಷಣಾ ಕಾಯ್ದೆಯ ಬಗೆಗೆ ಸ್ವಯಂ ಸೇವಾ ಸಂಘಗಳ ಮೂಲಕ ಮಹಿಳೆಯರಲ್ಲಿ ಅರಿವು ಮೂಡಿಸುವುದು.

೮. ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳಾ ಕಾರ್ಮಿಕರನ್ನು ಕುರಿತಂತೆ ವ್ಯವಸ್ಥಿತವಾದ ಅಧ್ಯಯನವನ್ನು ಕೈಗೊಳ್ಳುವುದು.

೯. ಅರೋಗ್ಯ ತಪಾಸಣಾ ಶಿಬಿರಗಳನ್ನು ಆಯೋಜಿಸಿ ಮಹಿಳೆಯರಿಗೆ ಆರೋಗ್ಯವನ್ನು ಕಾಯ್ದುಕೊಳ್ಳಬೇಕಾದ ಅಗತ್ಯ ಕಾರ್ಯಕ್ರಮಗಳನ್ನು ತಿಳಿಸುವುದು.

ಈ ಎಲ್ಲಾ ಕಾರ್ಯಗಳ ಮೂಲಕ ಮಹಿಳಾ ಕಾರ್ಮಿಕರಿಗೆ ನಡೆಯುವ ಶೋಷಣೆಯನ್ನು ಹೋಗಲಾಡಿಸಲು ಮತ್ತು ಅವರ ಸ್ಥಿತಿಗತಿಗತಿಗಳನ್ನುಸುಧಾರಿಸಲು ಸಾಧ್ಯವಿದೆ. ಇದಕ್ಕಾಗಿ ಆದಷ್ಟು ಬೇಗ ಕ್ರಮ ಕೈಗೊಳ್ಳಬೇಕಾಗಿದೆ. ಈ ಮೂಲಕ ಮಹಿಳೆಯರಲ್ಲಿ ಆತ್ಮಸ್ಥೈರ್ಯ ತುಂಬಬೇಕು. ಮಹಿಳೆಯರ ಉನ್ನತಿಯಲ್ಲಿ ಸಮಾಜದ ಹಾಗು ದೇಶದ ಅಭಿವೃದ್ಧಿಯು ಅಡಗಿದೆ ಎಂದು ತಿಳಿಯಬೇಕು.

## ೫.೩. ಸಮಾಪ್ತಿ

ಇದು ಅಸಂಘಟಿತ ವಲಯದ  ಮಾಲ್ ಗಳಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳ ಮಂಗಳೂರು ತಾಲೂಕಿನಲ್ಲಿ ಒಂದು ಅಧ್ಯಯನವಾಗಿದೆ.

ಮಂಗಳೂರು ತಾಲೂಕಿನಲ್ಲಿ  ಕೈಗೊಂಡ ಪ್ರಕರಣ ಅಧ್ಯಯನವು ಮಂಗಳೂರು ತಾಲೂಕಿನಲ್ಲಿ ಇರುವ ಪ್ರಮುಖ ಮಾಲ್ ಗಳಲ್ಲಿ ದುಡಿಯುವ ಮಹಿಳೆಯರ ಸಂದರ್ಶನವನ್ನು ಒಳಗೊಂಡಿತ್ತು. ಮಹಿಳಾ ಕಾರ್ಮಿಕರ ಜೊತೆ ಸಮಾಲೋಚನೆ ನಡೆಸಿ ಅವರಿಂದ ಮಾಹಿತಿ ಸಂಗ್ರಹಿಸಿ ಮಾಡಿದ ಅಧ್ಯಯನವಾಗಿದೆ.ಭಾರತವು ಮುಂದುವರಿಯುತ್ತಿರುವ ಸಾಲಿನಿಂದ ಮುಂದುವರಿದ ಸಾಲಿಗೆ ಸೇರ್ಪಡೆ ಯಾಗುತ್ತಿರುವ ಈ ಸಮಯದಲ್ಲಿ ಮಹಿಳಾ ಕಾರ್ಮಿಕರ ಸ್ವಾವಲಂಬಿಯಾಗಿ ಬದುಕುವುದು ಅತೀ ಅವಶ್ಯಕವಾಗಿದೆ. ಈ ಅಧ್ಯಯನದ ನೆರವಿನಿಂದ ದಿನೇ ದಿನೇ ಹೆಚ್ಚುತ್ತಿರುವ ಮಹಿಳೆಯ ಸಮಸ್ಯೆಗಳು ಅವರ ಶೋಷಣೆ  ಅದರ ಕಾರಣ ಮತ್ತು ಪರಿಣಾಮಗಳು, ಮುಂತಾದವುಗಳನ್ನು ಅರ್ಥಮಾಡಿಕೊಂಡು ವಿಶ್ಲೇಷಿಸಲು ನೆರವಾಗಿದೆ. ಒಟ್ಟಾಗಿ ಈ ಅಧ್ಯಯನವು ಮಹಿಳಾ ಕಾರ್ಮಿಕರ ದೃಷ್ಟಿಕೋನದಿಂದ ಅರ್ಥೈಸಲು ಅವರ ಪಾತ್ರ ಮತ್ತು ಹಕ್ಕುಗಳ ಅರಿವನ್ನು ಮೂಡಿಸಲು ಮಹಿಳೆಯರ ಅಭಿವೃದ್ಧಿಗೆ ಮಾರಕವಾಗಿರುವ ಅಡೆತಡೆಗಳನ್ನು ತೊಡೆದುಹಾಕಲು ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ಸಕ್ರಿಯವಾಗಿ ಭಾಗವಹಿಸುವಂತೆ  ಮಾಡಲು ಸರಿಯಾದ ಅರಿವನ್ನುಮೂಡಿಸುವ ಹಾಗೂ ಸಮಾಜದ ಆತ್ಮಸಾಕ್ಷಿಯನ್ನು ಜಾಗೃತಿಗೊಳಿಸುವ  ಕಾರ್ಯ ಆಗಬೇಕಾಗಿದೆ. ಮಾಲ್ ಗಳಲ್ಲಿ  ದುಡಿಯುವ ಕಾರ್ಮಿಕರು ಬಹಳ ಮಂದಿ ಇದ್ದು ಸರಕಾರ ಹಾಗು ಸಂಘ ಸಂಸ್ಥೆಗಳ ಜೊತೆ ಅವರನ್ನು ಗುರುತಿಸುವ, ಗೌರವದಿಂದ ಕಾಣುವ, ಅವರ ಆರ್ಥಿಕ ಕೊಡುಗೆಗಳನ್ನು ಮೌಲ್ಯಮಾಪನ ಮಾಡುವ ಮತ್ತು ಮುಂದಿನ ಪ್ರಗತಿಗೆ ಪ್ರೋತ್ಸಾಹ, ಉತ್ತೇಜನ ಗಳಿಸಿಕೊಡುವ ಮನಸ್ಸು ನಿರ್ಧಾರ ನಮ್ಮೆಲ್ಲರದ್ದಾಗಬೇಕೆಂದು ಆಶಿಸುವ ಮತ್ತು ಅದಕ್ಕಾಗಿ ನಮ್ಮಿಂದ ಆದ ಪ್ರಯತ್ನವನ್ನು ಪಡೋಣ ಅದಕ್ಕಾಗಿ ಎಲ್ಲರು ಕೈಜೋಡಿಸೋಣ.

## ಪ್ರಶ್ನಾವಳಿ

" ಅಸಂಘಟಿತ ವಲಯ ಮಾಲ್ ಗಳಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿ - ಮಂಗಳೂರು ತಾಲೂಕಿನ ಒಂದು ಅಧ್ಯಯನ"

**ಪೀಠಿಕೆ**

ಪ್ರಸ್ತುತ ಆಧ್ಯಯನದ ಮುಖ್ಯ ಉದ್ದೇಶ ಅಸಂಘಟಿತ ವಲಯ ಮಾಲ್ ಗಳಲ್ಲಿ ದುಡಿಯುವ ಮಹಿಳಾ ಉದ್ಯೋಗಿಗಳ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳನ್ನು ಪರಿಶೀಲಿಸುವುದು ಮತ್ತು ಪರಾಮರ್ಶೆ ನಡೆಸುವುದು.

**ಸೂಚನೆಗಳು**

**ಈ ಪ್ರಶ್ನಾವಳಿಯಲ್ಲಿ ವಿವಿಧ ಪ್ರಕಾರದ ಪ್ರಶ್ನೆಗಳಿವೆ. ಪ್ರಶ್ನೆಗಳಿಗೆ ಕೊಟ್ಟ ಉತ್ತರದಲ್ಲಿ ಸರಿಯಾದುದನ್ನು ಉತ್ತರಿಸಿದರಾಯಿತು.**

- ಈ ಸಮೀಕ್ಷೆಯನ್ನು ಕೇವಲ ಅಧ್ಯಯನದ ಉದ್ದೇಶಕ್ಕಾಗಿ ಮಾತ್ರ ಮಾಡಲಾಗುತ್ತಿದೆ.
- ನೀವು ವ್ಯಕ್ತಪಡಿಸಿರುವ ಅಭಿಪ್ರಾಯಗಳ ಗೌಪ್ಯತೆಯನ್ನು ಕಾಪಾಡಲಾಗುವುದು.
- ನಿಮ್ಮ ಇತರೆ ಉಪಯುಕ್ತ ಸಲಹೆ ಮತ್ತು ಪೂರಕ ಅಭಿಪ್ರಾಯವಿದ್ದಲ್ಲಿ ಕೃತಜ್ಞತಾ ಪೂರ್ವಕವಾಗಿ ಸ್ವೀಕರಿಸಲಾಗುವುದು.
- ನಿಮ್ಮ ಸಹಕಾರಕ್ಕಾಗಿ ಅನಂತ ಕೃತಜ್ಞತೆಗಳು.

೧. ವೈಯಕ್ತಿಕ ಮಾಹಿತಿ

೨. ಸಾಮಾಜಿಕ ಮಾಹಿತಿ

೩. ಉದ್ಯೋಗ ಮಾಹಿತಿ

೧. ವೈಯಕ್ತಿಕ ಮಾಹಿತಿ

೧) ಹೆಸರು:

೨) ವಿಳಾಸ:

೩) ವಿವಾಹಿತೆ: ಹೌದು ( ) ಅಲ್ಲ ( )

೪) ವಿವಾಹಿತೆಯಾದಲ್ಲಿ ಮಕ್ಕಳ ಸಂಖ್ಯೆ : ಗಂಡು ( ) ಹೆಣ್ಣು ( )

೨. ಸಾಮಾಜಿಕ ಮಾಹಿತಿ

೫) ಶಿಕ್ಷಣ

ಪ್ರಾಥಮಿಕ ( ) ಪ್ರೌಢ ( )

ಪದವಿಪೂರ್ವ ( ) ಪದವಿ ( )

೬) ಯಾವ ಧರ್ಮಕ್ಕೆ ಸೇರಿದವರು

ಹಿಂದು ( ) ಮುಸ್ಲಿಂ ( )

ಕ್ರಿಶ್ಚಿಯನ್ ( ) ಇತರೆ ( )

೭) ಹಿಂದು ಆಗಿದ್ದಲ್ಲಿ ಯಾವ ಜಾತಿಗೆ ಸೇರಿದವರು

ಮುಂದುವರಿದ ( ) ಹಿಂದುಳಿದ ( )

ಪರಿಶಿಷ್ಟ ಜಾತಿ ( ) ಪರಿಶಿಷ್ಟ ಪಂಗಡ ( )

ಅಲ್ಪ ಸಂಖ್ಯಾತರು ( ) ಇತರ ಹಿಂದುಳಿದ ( )

೨. ಉದ್ಯೋಗ ಮಾಹಿತಿ

೮) ಎಷ್ಟು ವರ್ಷದಿಂದ ಈ ವಲಯದಲ್ಲಿ ದುಡಿಯುತ್ತಿದ್ದೀರಿ?

ಒಂದಕ್ಕಿಂತ ಕಡಿಮೆ ( ) ೧-೩ ವರ್ಷ ( )

೩-೫ ವರ್ಷ ( ) ೫ ಕ್ಕಿಂತ ಹೆಚ್ಚು ( )

೯) ನೀವು ಈ ವಲಯದಲ್ಲಿ ಕೆಲಸ ಮಾಡಲು ಇಷ್ಟ ಪಡುತ್ತೀರಾ?

ಹೌದು ( ) ಇಲ್ಲ ( )

೧೦) ನಿಮಗೆ ಕೆಲಸದ ಭದ್ರತೆ ಇದೆಯೇ?

ಹೌದು ( ) ಇಲ್ಲ ( )

೧೧) ನಿಮಗೆ ಆರೋಗ್ಯ ರಕ್ಷಣೆ ಇದೆಯೇ ?

ಹೌದು ( ) ಇಲ್ಲ ( )

೧೨) ದುಡಿಯುವ ಸ್ಥಳದಲ್ಲಿ ಸರಿಯಾಗಿ ವೇತನ ಪಾವತಿ ಮಾಡುತ್ತಾರೆಯೇ

ಹೌದು ( ) ಇಲ್ಲ ( )

೧೩) ನಿಮಗೆ ವಾರ್ಷಿಕ ವೇತನ ಹೆಚ್ಚಳ ಆಗಿದೆಯೇ?

ಹೌದು ( ) ಇಲ್ಲ ( )

೧೪) ನಿಮಗೆ ಸರಕಾರಿ ರಜಾ ದಿನಗಳ ಸೌಲಭ್ಯವಿದೆಯೇ?

ಹೌದು ( ) ಇಲ್ಲ ( )

೧೫) ದುಡಿಯುವ ಸ್ಥಳದಲ್ಲಿ ಮುಲಭೂತ ಸೌಕರ್ಯಗಳಿವೆಯೇ?

ಹೌದು ( ) ಇಲ್ಲ ( )

೧೬) ನಿಮ್ಮ ದುಡಿಯುವ ಸ್ಥಳದಲ್ಲಿ ಆರೋಗ್ಯ ವಿಮೆ ಯೋಜನೆಗಳಿವೆಯೇ?

ಹೌದು ( ) ಇಲ್ಲ ( )

೧೭) ನಿಮ್ಮ ಕೆಲಸದಲ್ಲಿ ಕಾರ್ಮಿಕರ ಭವಿಷ್ಯ ನಿಧಿಯ ಸೌಲಭ್ಯವಿದೆಯೇ ?

ಹೌದು ( ) ಇಲ್ಲ ( )

೧೮) ಊಟದ ಸಮಯ ಹೊರತುಪಡಿಸಿ ನೀವು ದಿನಕ್ಕೆ ಎಷ್ಟು ಗಂಟೆ ದುಡಿಯುತ್ತೀರಿ?

೭ ಗಂಟೆ ( ) ೮ ಗಂಟೆ ( ) ೮ಕ್ಕಿಂತ ಜಾಸ್ತಿ ( )

೧೯) ನೀವು ಕೆಲಸ ಮಾಡುವಾಗ ದೈಹಿಕ ಶ್ರಮವನ್ನು ಉಪಯೋಗಿಸ ಬೇಕಾಗುತ್ತದೆಯೇ ?

ಹೌದು ( ) ಇಲ್ಲ ( )

೨೦) ನೀವು ಕೆಲಸ ಮಾಡುವಲ್ಲಿ ಮಾನಸಿಕ ಒತ್ತಡ ಇದೆಯೇ?

ಹೌದು ( ) ಇಲ್ಲ ( )

೨೧) ದುಡಿಯುವ ಸ್ಥಳದಲ್ಲಿ ಗಂಡು ಹೆಣ್ಣು ಎಂಬ ಭೇದವಿದೆಯೇ?

ಹೌದು ( ) ಇಲ್ಲ ( )

೨೨) ದುಡಿಯುವಲ್ಲಿ ದೌರ್ಜನ್ಯ ನಡೆಯುತ್ತಿದೆಯೇ ?

ಹೌದು ( ) ಇಲ್ಲ ( )

೨೩) ಹೌದಾದಲ್ಲಿ ಯಾವ ರೀತಿ ?

ಹೆಚ್ಚು ಕೆಲಸದ ಒತ್ತಡ ( ) ನಿಮ್ಮಲ್ಲಿಯೇ ಎಲ್ಲಾ ಕೆಲಸ ಮಾಡಿಸುವುದು ( )

ನಿಂತು ಕೊಂಡೇ ಕೆಲಸ ಮಾಡುವುದು ( )

೧೪) ಕೆಲಸ ಮಾಡುವಲ್ಲಿ ಗ್ರಾಹಕರಿಂದ ತೊಂದರೆ ಇದೆಯೇ?

ಹೌದು ( ) ಇಲ್ಲ ( )

೧೫) ನಿಮ್ಮ ವಿಧ್ಯಾಭ್ಯಾಸಕ್ಕೂ ನಿಮ್ಮ ಕೆಲಸಕ್ಕೂ ಸಂಬಂಧವಿದೆಯೇ?

ಹೌದು ( ) ಇಲ್ಲ ( )

೧೬)ನೀವು ಈ ವಲಯದಲ್ಲಿ ದುಡಿಯಲು ಕಾರಣ?

ಹಣಕಾಸಿನ ಅವಶ್ಯಕತೆ ( ) ಬೇರೆಯಾವುದೇ ಕೆಲಸ ಸಿಗದಿರುವುದು ( )

ಇತರೆ ( )

೧೭) ಮದ್ಯಾಹ್ನದ ಸಮಯದಲ್ಲಿ ಎಷ್ಟು ಗಂಟೆ ವಿಶ್ರಾಂತಿ ಪಡೆಯುತ್ತೀರಿ?

೧/೨ ಗಂಟೆ ( ) ೧ ಗಂಟೆ ( )

೧೮) ನೀವು ಸಾಮಾನ್ಯವಾಗಿ ಕೆಲಸ ಮಾಡುವ ವೇಳೆ ಯಾವ ನಿಲುವಿನಲ್ಲಿರುತ್ತೀರಾ?

ಆಸನದಲ್ಲಿ ಕೂತು ( ) ನಡೆದಾಡಿ ( )

ನಿಂತು ಕೊಂಡು ( ) ನೆಲದ ಮೇಲೆ ಕೂತು ( )

೧೯) ನಿಮಗೆ ಕೆಲಸ ಸಂಬಂಧಿತ ಆರೋಗ್ಯ ಭಾದೆಗಳಿವೆಯೇ?

ಹೌದು ( ) ಇಲ್ಲ ( )

೨೦) ನೀವು ಇದೆ ವಲಯದಲ್ಲಿ ಮುಂದುವರಿಯಲು ಬಯಸುತ್ತೀರಾ?

ಹೌದು ( ) ಇಲ್ಲ ( )

೨೧) ಮಾಲ್ ಗಳಲ್ಲಿ ಕೆಲಸ ಮಾಡಲು ಮನೆಯವರ ಒಪ್ಪಿಗೆ ಇದೆಯೇ?

ಹೌದು ( ) ಇಲ್ಲ ( )

೨೧) ನೀವು ಸೇವೆ ಸಲ್ಲಿಸುವ ಕ್ಷೇತ್ರ ನಿಮಗೆ ತೃಪ್ತಿ ನಿಡಿದೆಯೇ?

ಉನ್ನತ ಮಟ್ಟದಲ್ಲಿ ನೀಡಿಲ್ಲ ( ) ಸಮಾಧಾನವಿಲ್ಲ ( )

ಸಮಾಧಾನವಿದೆ ( )

೨೨) ನಿಮ್ಮ ವೃತ್ತಿಗೆ ನಿಮ್ಮ ಕುಟುಂಬದವರ ಸಹಕಾರ ಹೇಗಿದೆ?

ಪ್ರೋತ್ಸಾಹದಾಯಕ ( ) ತೃಪ್ತಿಕರ ( ) ಸಹಕಾರವಿಲ್ಲ ( )

೨೪) ಕೌಟಂಬಿಕ ಒತ್ತಡ ನಿಮ್ಮ ವೃತ್ತಿಗೆ ಕಿರಿಕಿರಿ ಮಾಡುವುದೇ?

ಹೌದು ( ) ಇಲ್ಲ ( )

೧೫) ನಿಮ್ಮ ಸಂಬಳದ ಖರ್ಚಿನ ನಿಯಂತ್ರಣ ಯಾರ ಕೈಯಲ್ಲಿದೆ?

ಹೌದು ( ) ಇಲ್ಲ ( )

೧೬) ನಿಮ್ಮ ಸಂಬಳದ ಖರ್ಚಿನ ನಿಯಂತ್ರಣ ಯಾರ ಕೈಯಲ್ಲಿದೆ?

ನನ್ನ ( ) ಗಂಡನ ( ) ಪಾಲಕರ ( )

೧೭)ನಿಮ್ಮ ವೇತನವನ್ನು ಮನೆಯವರು ಎಷ್ಟರ ಮಟ್ಟಿಗೆ ಅವಲಂಬಿಸಿದ್ದಾರೆ?

೦% ( ) ೫೦% ( ) ೭೫% ( ) ೧೦೦% ( )

೨೮) ನಿಮ್ಮ ವೇತನ ಖರ್ಚಿನ ಉದ್ದೇಶ?

ಉಳಿತಾಯ ( ) ಮನೆಖರ್ಚು ( )

ಸಾಲತೀರಿಸಲು ( ) ವಸ್ತ್ರಾಭರಣ ಖರೀದಿ ( )

೨೯) ನಿಮ್ಮ ಹಿಂದಿನ ಸ್ಥಿತಿಗತಿಗಿಂತ ಈಗಿನ ಸ್ಥಿತಿ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ

ಉತ್ತಮವಾಗಿದೆಯೇ?

ಹೌದು ( ) ಇಲ್ಲ ( )

೪೦) ಈ ಉದ್ಯೋಗದ ಬಗ್ಗೆ ನಿಮಗೆ ಇರುವ ಅಭಿಪ್ರಾಯವೇನು?

ಸಹಿ

ಸ್ಥಳ

ದಿನಾಂಕ

# ಪರಾಮರ್ಶನ ಗ್ರಂಥಗಳು


- ಅಂಜನಪ್ಪ ಬಿ.ಹೆಚ್. ಮಹಿಳೆ ಮತ್ತು ದುಡಿಮೆ. ದೇಸಿ ಪುಸ್ತಕ ವಿಜಯನಗರ ಬೆಂಗಳೂರು ೨೦೦೯

- ಅಶ್ವಿನಿ ಮಹಾಜನ್ (ಮೂಲ) (೧೯೯೮) ಜಾಗತೀಕರಣ ಮತ್ತು ಉದ್ಯೋಗ ಸ್ವದೇಶಿ ಜಾಗರಣ ಮಂಚ, ಕರ್ನಾಟಕ

- ಅನ್ನಪೂರ್ಣೇಶ್ವರಿ ಎನ್."ಭಾರತದ ಅರ್ಥಿಕಾಭಿವೃದ್ದಿ" ಅರ್ಜುನ್ ಪಬ್ಲಿಷಿಂಗ್ ಹೌಸ್ ,ಮೈಸೂರು.

- ಅರ್ಜುನ್ ದೇವ್ , ಇಂದಿರಾ ಅರ್ಜುನ್ ದೇವ್,ಸುಪ್ತಾದಾಸ್,ಅನುವಾದ ಕೆ.ಹೆಚ್. ಶ್ರೀನಿವಾಸ್ ಮಾನವ ಹಕ್ಕುಗಳು ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ.

- ಒಡೆಯರ್ ಡಿ.ಹೆಗಡೆ. ಎನ್. ಅನ್ನಪೂರ್ಣೇಶ್ವರಿ ಮಹಿಳಾ ಅಧ್ಯಯನ ಆರ್ಥಿಕ ಸಾಮಾಜಿಕ ನೆಲೆಗಳು ಮತ್ತು ಸಬಲೀಕರಣ ಶ್ರೀ ವಿಶಾಲ್ ಎಂಟರ್ ಪ್ರೈಸಸ್ ಬೆಂಗಳೂರು ೨೦೦೯

- ಕಮಲಾದೇವಿ ಚಟ್ಟೋಪಾಧ್ಯಾಯ,೧೯೮೪, ಭಾರತೀಯ ಮಹಿಳೆಯರ ಸ್ವಾತಂತ್ರ್ಯ ಹೋರಾಟ, ವೈದೇಹಿ (ಅನು) ಅಕ್ಷರ ಪ್ರಕಾಶನ, ಹೆಗ್ಗೋಡು ಸಾಗರ.

- ಚಂದ್ರ ಪೂಜಾರಿ, ಸಂಶೋಧನಾ ಪ್ರಸ್ತಾವ,ವಿದ್ಯಾರಣ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೮

- ಚಂದ್ರಶೇಖರ ಟಿ. ಆರ್. ೨೦೦೧ ಮಹಿಳೆ ಆರ್ಥಿಕತೆ ಮತ್ತು ಅಭಿವೃದ್ಧಿ , ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

- ಜಯಶೀಲ , ಶೌಕತ್ ಆಲಿ ಎಂ ಮೇಗಲಮನಿ, ಸುಧಾಕರ ಎಸ್. ಕಿಸಾನ್ ಪಬ್ಲಿಕೇಷನ್ಸ್ ಮಂಗಳೂರು ೨೦೦೭

- ನ್ಯಾಷನಲ್ ಇನ್ಫಾರ್ಮೆಶನ್ ಸೆಂಟರ್, ಎ. ವಿಂಗ್ ಶಾಸ್ತ್ರೀ ಭವನ್, ಡಾ.ರಾಜೇಂದ್ರಪ್ರಸಾದ್ ರೋಡ್ ನ್ಯೂಡೆಲ್ಲಿ.
- ಲೀಲಾವತಿ ಚಾರಿ, ೧೯೯೨.ಮಹಿಳೆಯರ ಹಕ್ಕುಗಳು ಪ್ರಪುಲ್ಲಾ ನಾಯಿಕ (ಅನು) ಜಾಗೃತ ಭಾರತ ಪ್ರಕಾಶನ, ಧಾರವಾಡ.
- ವಿಜಯಕುಮಾರಿ ಎಸ್ ಕರಿಕಲ್,ಮಹಿಳೆ ಮತ್ತು ಸಮಾಜ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೭
- ಶ್ರೀ ಪ್ರಸಾದ್ ಎಚ್ ಮತ್ತು ಮೂರ್ತಿ ಟಿ. ಎಚ್: ಸ್ವ ಉದ್ಯೋಗ ಹಾಗೂ ಮಹಿಳಾ ಸ್ವಾವಲಂಬನೆ ಯಶೋಗಾಥೆ, ಜಯಶೀಲ ಶೌಕತ್ ಆಲಿ ಎಂ, ಮೇಗಲಮನಿ, ಸುಧಾಕರ್, ಎಸ್ (ಸಂ), ಕಿಸಾನ್ ಪಬ್ಲಿಕೇಶನ್, ಮಂಗಳೂರು, ೨೦೦೭.
- ಸುಜಾತ ಕೆ ಎಸ್ ಮತ್ತು ರಘು ರಾಮ ಎ: ಮಹಿಳಾ ಸಬಲೀಕರಣ, ಕಿರು ಸಾಲ ಮತ್ತು ಸ್ವ ಸಹಾಯ ಗುಂಪುಗಳು: ಸತ್ಯ ಮಿಥ್ಯಗಳು, ಜಯಶೀಲ ಶೌಕತ್ ಆಲಿ ಎಂ, ಮೇಗಲಮನಿ, ಸುಧಾಕರ್, ಎಸ್ (ಸಂ), ಕಿಸಾನ್ ಪಬ್ಲಿಕೇಶನ್, ಮಂಗಳೂರು, ೨೦೦೭.
- ಹೆಗಡೆ ಒಡೆಯರ್. ಡಿ. ಮತ್ತು ಅನ್ನಪೂರ್ಣೇಶ್ವರಿ ಎನ್: ಮಹಿಳಾ ಅಧ್ಯಯನಗಳು, ಆರ್ಥಿಕ ನೆಲೆಗಳು ಮತ್ತು ಆಯಾಮಗಳು, ಮಾನವಾಭಿವೃದ್ಧಿಗಳ ಕೇಂದ್ರ ಮೈಸೂರ್, ೨೦೦೩.
- ಹೇಮಲತಾ ಎಚ್ ಎಂ: ಅರ್ಥ, ಹುಟ್ಟು, ಬೆಳವಣಿಗೆ, ಪರಿಕಲ್ಪನೆ, ಸಿದ್ಧಾಂತಗಳು, ಮಹಿಳಾ ಅಧ್ಯಯನ ೧, ಮೈಸೂರ್, ೨೦೦೪.

- ಹೇಮಲತಾ ಎಚ್ ಎಂ: ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆ, ರಾಜಕೀಯ ಮತ್ತು ಅಭಿವೃದ್ಧಿ ಪ್ರಕ್ರಿಯೆಯಲ್ಲಿ, ಮಹಿಳೆಯರು, ಮಹಿಳಾ ಅಧ್ಯಯನ ೨, ಡಿ.ವಿ.ಕೆ ಮೂರ್ತಿ ಪ್ರಕಾಶಕರು, ಮೈಸೂರ್, ೨೦೦೪.

- ಹೇಮಲತಾ ಎಚ್. ಎಂ. ಮಹಿಳಾ ಅಧ್ಯಯನ ೨ ಮಹಿಳೆ ಮತ್ತು ದುಡಿಮೆ ಮಹಿಳಾಭಿವೃದ್ಧಿ ಕಾರ್ಯ ನೀತಿ ಹಾಗು ಯೋಜನೆಗಳು ,ಡಿ.ವಿ.ಕೆ. ಮೂರ್ತಿ ಪ್ರಕಾಶಕರು , ಮೈಸೂರು ೨೦೦೫

- ಹ್ಯೂಮನ್ ರೈಟ್ಸ್ ಎ ವೆರಿ ಶಾರ್ಟ್ ಇಂಟ್ರೊಡಕ್ಷನ್ ಅಂಡ್ ಕ್ಲಾಪ್ ಹಮ್ ಆಕ್ಸ್ ಫರ್ಡ್ ಯುನಿವರ್ಸಿಟಿ ಪ್ರೆಸ್ ೨೦೦೭.